ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆ

# ಕರ್ನಾಟಕ ಏಕೀಕರಣ

ಹಾಗೂ

# ನಾಮಕರಣ

ಡಾ. ಸಿ.ಆರ್. ಗೋವಿಂದರಾಜು

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು 560 001

**KARNATAKA EKIKARANA HAAGU NAAMAKARANA**

Written by

**Dr. C.R. Govindaraju**

Head, Dept. of History

Kannada University, Hampi

Vidyaranya 583 276

**Published by**

Karnataka Legislative Assembly Secretariat,

Vidhana Soudha, Bangalore-01.



No. Pages : 113 + VIII price : 15/- Rs

First Edition: 2005. No. of Copies : 2000

Printed and Designed by:

**Government Printing Press**

Bangalore-01.

**ಕರ್ನಾಟಕ ಏಕೀಕರಣ ಹಾಗೂ ನಾಮಕರಣ**

ಲೇಖಕರು

**ಡಾ|| ಸಿ.ಆರ್. ಗೋವಿಂದರಾಜು**

**ಪ್ರಕಟಣೆ**

ಕರ್ನಾಟಕ ವಿಧಾನ ಸಭೆ ಸಚಿವಾಲಯ

ವಿಧಾನ ಸೌಧ, ಬೆಂಗಳೂರು-1.

ಪುಟಗಳು : 113 + VIII ಬೆಲೆ: ರೂ 15/-

ಮೊದಲ ಮುದ್ರಣ: 2005 ಪ್ರತಿಗಳು : 2000



ಮುದ್ರಣ ಮತ್ತು ಮುಖಪುಟ ವಿನ್ಯಾಸ:

ಸರ್ಕಾರಿ ಮುದ್ರಣಾಲಯ, ಬೆಂಗಳೂರು-560 001

# ವಿಧಾನ ಮಂಡಲ ಗ್ರಂಥಾಲಯ ಸಮಿತಿ

## 2005-2006

---

ಅಧ್ಯಕ್ಷರು

**ವಿ.ಆರ್. ಸುದರ್ಶನ್**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಕೃಷ್ಣ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ವಿಶ್ವನಾಥ್ ಪಾಟೀಲ್ ಹೆಬ್ಬಾಳ್**

ವಿಧಾನ ಸಭಾ ಸದಸ್ಯರು ಹಾಗೂ

ಉಪಸಮಿತಿಯ ಅಧ್ಯಕ್ಷರು

**ಜಿ.ಎಸ್. ಗಡ್ಡದೇವರ ಮಠ**

ವಿಧಾನಸಭಾ ಸದಸ್ಯರು

**ಆರ್. ಧ್ರುವನಾರಾಯಣ್**

ವಿಧಾನಸಭಾ ಸದಸ್ಯರು

**ಕಳಕಪ್ಪ ಜಿ. ಬಂಡಿ**

ವಿಧಾನಸಭಾ ಸದಸ್ಯರು

**ಡಾ|| ವೀರಬಸವಂತರೆಡ್ಡಿ ಮುದ್ನಾಳ್**

ವಿಧಾನಸಭಾ ಸದಸ್ಯರು

**ಡಾ|| ಚಂದ್ರಶೇಖರ ಬಿ. ಕಂಬಾರ**

ವಿಧಾನ ಪರಿಷತ್ತಿನ ಸದಸ್ಯರು

**ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ತಿನ ಸದಸ್ಯರು

**ಉಮಾಶ್ರೀ**

ವಿಧಾನಪರಿಷತ್ತಿನ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

## ಅಧಿಕಾರ ವರ್ಗ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಟಿ. ರಾಜಣ್ಣ | ಕಾರ್ಯದರ್ಶಿ |
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎಸ್. ಪ್ರಭಾಕರರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| ಮಿರ್ಜಾ ಮೆಹ್ದಿ | ಅಧೀನ ಕಾರ್ಯದರ್ಶಿ |
| ಎನ್. ನರಸಿಂಹಮೂರ್ತಿ | ಶಾಖಾಧಿಕಾರಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಜಯಶಂಕರಮೂರ್ತಿ | ಕಾರ್ಯದರ್ಶಿ(ಪ್ರ) |
| ಟಿ. ಕೃಷ್ಣೇಗೌಡ | ಸಭಾಪತಿಯವರ ಕಾರ್ಯದರ್ಶಿ |

### ಸಂಪಾದಕರು


**ಎಲ್.ಎನ್. ಮುಕುಂದರಾಜ್**

ಕನ್ನಡ ಉಪನ್ಯಾಸಕರು, ಯಲಹಂಕ

(ಅನ್ಯಕರ್ತವ್ಯದ ಮೇರೆಗೆ)

# ಲೇಖಕರ ಮಾತು

'ನಾಡಿನ ಏಕೀಕರಣ ಹಾಗೂ ನಾಮಕರಣ' ಈ ಎರಡೂ ಘಟನೆಗಳು ಕಳೆದ ಶತಮಾನದಲ್ಲಿ ಮಹತ್ತ್ವದ ಸ್ವರೂಪ ಪಡೆದಂಥವು. ಚಾರಿತ್ರಿಕವಾಗಿಯಷ್ಟೇ ಅಲ್ಲದೆ ಕನ್ನಡಿಗರ ಅನನ್ಯತೆ-ಅಸ್ಮಿತೆಗಳ ನೋಟದಿಂದಲೂ ಇವು ಗಂಭೀರವಾದ ಪರಿಣಾಮ ಬೀರಿವೆ. ಚರಿತ್ರೆಯಲ್ಲಿ ದಾಖಲೆಗಳನ್ನು ಬಳಸಿಕೊಂಡಾಕ್ಷಣ ಅದು ಸಂರಚನೆಗೊಳ್ಳುವುದಿಲ್ಲ. ಬದಲಾಗಿ ಅವುಗಳ ವಿಮರ್ಶಾತ್ಮಕ ವಿಶ್ಲೇಷಣೆಯೆ ಪ್ರಧಾನ. ಈ ಜರೂರಿನ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಕೃತಿಯು ಏಕೀಕರಣ ಚಳವಳಿ ಹಾಗು 'ಕರ್ನಾಟಕ' ನಾಮಕರಣದ ಪ್ರಕ್ರಿಯೆಗಳನ್ನು ಪರಿಶೀಲಿಸಲು ಪ್ರಯತ್ನಿಸಿದೆ. 'ಸುವರ್ಣ ಕರ್ನಾಟಕೋತ್ಸವ'ಕ್ಕೆ ಅಣಿಯಾಗುತ್ತಿರುವ ಕನ್ನಡಿಗರಿಗೆ ಪ್ರಸ್ತುತ ಕೃತಿ ಚರ್ಚೆಗೆ ಅವಕಾಶ ಮಾಡಿಕೊಡಲಿ ಎಂಬುದು ನನ್ನ ಇಂಗಿತ. ಇಂಥ ಜವಾಬ್ದಾರಿಯುತ ಕೆಲಸವನ್ನು ನನಗೆ ವಹಿಸಿರುವುದು ಮನ್ನಣೆಯ ಸಂಗತಿ. ಇದಕ್ಕಾಗಿ ಕರ್ನಾಟಕ ವಿಧಾನಮಂಡಲದ ಗ್ರಂಥಾಲಯ ಸಮಿತಿಯ ಗೌರವಾನ್ವಿತ ಪದಾಧಿಕಾರಿಗಳೆಲ್ಲರಿಗೂ ನನ್ನ ಧನ್ಯವಾದಗಳು.

ಪ್ರಸ್ತುತ ಕೃತಿಯ ರಚನೆಗೆ ಒತ್ತಾಸೆಯಾಗಿ ನಿಂತವರು ನಾಡಿನ ಸಾಂಸ್ಕೃತಿಕ ಚೇತನವಾದ ಪ್ರೊ. ಚಂದ್ರಶೇಖರ ಕಂಬಾರ ಅವರು. ಕನ್ನಡಿಗರು ಈ ಎರಡೂ ಘಟನೆಗಳನ್ನು 'ಹಂಪಿ'ಯಲ್ಲಿಯೆ ಸಂಭ್ರಮದಿಂದ ಆಚರಿಸಿದ್ದರು. ಅಲ್ಲದೆ ಕನ್ನಡಿಗರು ಸಾಂಸ್ಕೃತಿಕ ರಾಜಧಾನಿಯನ್ನಾಗಿ 'ಹಂಪಿ'ಯನ್ನು ಮಾತ್ರ ಮಾನ್ಯ ಮಾಡಿರುವುದು ವಿಶೇಷ. ಇಂಥ ತಾಣದಲ್ಲಿ ಕನ್ನಡ ವಿಶ್ವವಿದ್ಯಾಲಯವು ತಲೆಯೆತ್ತಿದೆ. ಇದರ ಸಂಸ್ಥಾಪಕ ಕುಲಪತಿಗಳಾದ ಡಾ. ಕಂಬಾರ ಮೇಷ್ಟರು ಸದರಿ ಕೆಲಸವನ್ನು ಇಲ್ಲಿ ಕಾರ್ಯನಿರ್ವಹಿಸುತ್ತಿರುವ ನನಗೆ ವಹಿಸಿರುವುದು ಸಂತಸದ ಸಂಗತಿ. ಅವರಿಗೆ ನಾನು ಆಭಾರಿ.

ಪ್ರಸ್ತುತ ಕೃತಿಯ ರಚನೆಗೆ ನಾಡಿನಾದ್ಯಂತ ಜನಸಾಮಾನ್ಯರು, ವಿದ್ವಾಂಸರು, ಹಿತೈಷಿಗಳು, ಸಂಘ-ಸಂಸ್ಥೆಗಳು, ಪತ್ರಾಗಾರ, ಗ್ರಂಥಾಲಯಗಳು ಒದಗಿಸಿಕೊಟ್ಟು ಸಹಕರಿಸಿದ್ದಾರೆ. ಅವರೆಲ್ಲರಿಗೂ ಹಾಗೂ ನನ್ನ ಸಂಶೋಧನ ಬರಹಗಳನ್ನು ಮೊದಲಿನಿಂದಲೂ ಪ್ರೋತ್ಸಾಹಿಸುತ್ತಿರುವ ಪ್ರೊ. ಕಿ.ರಂ. ನಾಗರಾಜ, ಪ್ರೊ. ಎಸ್. ಚಂದ್ರಶೇಖರ್, ಸನ್ಮಾನ್ಯ ಶ್ರೀ ಎಂ. ವೀರಪ್ಪ ಮೊಯಿಲಿ, ಡಾ. ಬಿ.ಎ. ವಿವೇಕ ರೈ, ಪ್ರೊ. ಲಕ್ಷ್ಮಣ್ ತೆಲಗಾವಿ, ವಿಶ್ವವಿದ್ಯಾಲಯದ ಎಲ್ಲ ಮಿತ್ರರಿಗೂ ಧನ್ಯವಾದಗಳು. ಅಂತೆಯೇ ಕೃತಿಯ ಈ ಹಂತಕ್ಕೆ

ಬರಲು ಕಾರಣರಾದ ಸಚಿವಾಲಯದ ಅಧೀನ ಕಾರ್ಯದರ್ಶಿಗಳಾದ ಮಿರ್ಜಾ ಮೆಹ್ದಿ, ಉಪ ಕಾರ್ಯದರ್ಶಿಗಳಾದ ಎಸ್. ಬಸವರಾಜ, ಗೆಳೆಯರಾದ ಮುಕುಂದ್‌ರಾಜ್ ಅವರಿಗೆ ಧನ್ಯವಾದಗಳು.

ಪ್ರಸ್ತುತ ಕೃತಿಯನ್ನು ಡಿ.ಟಿ.ಪಿ. ಮಾಡಿಕೊಟ್ಟ ಶ್ರೀಮತಿ ಎ. ನಾಗವೇಣಿ, ವಿನ್ಯಾಸ ಮಾಡಿಕೊಟ್ಟ ಗೆಳೆಯ ಕೆ.ಎಲ್. ರಾಜಶೇಖರ್, ಸಹಕರಿಸಿದ ವಿದ್ಯಾರ್ಥಿ ಮಿತ್ರ ಹಣಮಂತ್ರಾಯ ಹಾಗೂ ಮುದ್ರಿಸಿದ ಎಲ್ಲ ಸಿಬ್ಬಂದಿ ವರ್ಗದವರಿಗೆ ನನ್ನ ವಂದನೆಗಳು. ನನ್ನ ಈ ಕೃತಿಯ ಕರಡನ್ನು ತಿದ್ದಲು ಸಹಕರಿಸಿದ ಪತ್ನಿ ಭಾಗ್ಯವತಿ ಹಾಗೂ ಮಗಳು ಭೂಮಿಕಾ ಅವರನ್ನು ಇಲ್ಲಿ ನೆನಪಿಸಿಕೊಳ್ಳಲು ಬಯಸುತ್ತೇನೆ.

ಪ್ರಸ್ತುತ ಕೃತಿಯ ವಿಚಾರ, ಇತಿ-ಮಿತಿಗಳನ್ನು ಕುರಿತು ಸಲಹೆ-ಸೂಚನೆ, ಟೀಕೆ-ಟಿಪ್ಪಣಿ, ವಿಮರ್ಶೆ ಮಾಡಿ ಸಹಕರಿಸುವ ಎಲ್ಲ ಕನ್ನಡಿಗರಿಗೂ ಸ್ವಾಗತ.

**ಡಾ. ಸಿ.ಆರ್. ಗೋವಿಂದರಾಜು**

ಮುಖ್ಯಸ್ಥರು, ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

ಭಾಗ ೧



ಭಾಗ ೨

# ಕರ್ನಾಟಕ ಏಕೀಕರಣ ಚರಿತ್ರೆ

ವಸಾಹತುಶಾಹಿ ಆಳ್ವಿಕೆಗೆ ಒಳಪಟ್ಟಿದ್ದ ಅಂದಿನ ಇಂಡಿಯಾದ ಸ್ಥಿತಿಗತಿಗಳಿಗೂ, ಛಿದ್ರವಾಗಿದ್ದ ಕನ್ನಡ ಭೂಪರಿಸರಕ್ಕೂ ಹೆಚ್ಚಿನ ಭಿನ್ನತೆಗಳು ಕಾಣುವುದಿಲ್ಲ. ಈ ಹಿನ್ನೆಲೆಯಲ್ಲಿ 'ರಾಷ್ಟ್ರೀಯತೆ' ಮತ್ತು 'ಏಕೀಕರಣ'ದ ಪರಿಕಲ್ಪನೆಗಳು ಸಹ ಹೆಚ್ಚಿನ ವ್ಯತ್ಯಾಸಗಳನ್ನು ಪಡೆದಿರಲಿಲ್ಲ. ಆಡಳಿತ ನೀತಿಯು ಒಂದೇ ತೆರನಾಗಿದ್ದುದರಿಂದ ಪರಿಣಾಮಗಳೂ ಅದೇ ಥರದವೇ ಆಗಿದ್ದವು. ಹತ್ತೊಂಬತ್ತನೆಯ ಶತಮಾನದ ವೇಳೆಗೆ ಇಂಡಿಯಾದ ಜನರು ಅನೇಕ ರೀತಿಯ ಪಾಶ್ಚಿಮಾತ್ಯ ಮೌಲ್ಯ, ಚಿಂತನೆಗಳನ್ನು ಎರವಲು ಮಾಡಿಕೊಂಡಿದ್ದರು. ಅಂಥವುಗಳಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆಯೂ ಒಂದು. ಅಂದರೆ ಇದು ಹದಿನೆಂಟನೆಯ ಶತಮಾನದ ಅಂತ್ಯದ ವೇಳೆಗೆ ಉತ್ತರ ಅಮೇರಿಕ ಮತ್ತು ಪಶ್ಚಿಮ ಯುರೋಪಿನಲ್ಲಿ ಒಂದು ಪರಿಕಲ್ಪನೆಯಾಗಿ ಹಾಗೂ ಸಂಕಥನವಾಗಿ ರೂಪುತಳೆದಿತ್ತು.[7]

'ರಾಷ್ಟ್ರೀಯತೆ' ಎಂಬುದು ನಿರ್ದಿಷ್ಟ ಜನಾಂಗೀಯ ಗುಂಪು (Ethnic gruops) ಗಳು, ಭಾಷಿಕರು ಕಂಡುಕೊಳ್ಳುವ 'ಸ್ವಪ್ರಜ್ಞೆ' (Self Conciousness)ಯ ಅರಿವೂ ಆಗಿರುತ್ತದೆ. ಈ ಅರಿವಿನ ಅಥವಾ ಪರಿಕಲ್ಪನೆಯ ಪರಿಧಿಗಳಲ್ಲಿ ಹುಟ್ಟಿಕೊಂಡದ್ದೇ 'ಏಕೀಕರಣ'. ಆದರೆ 'ಏಕೀಕರಣ'ದ ಪರಿಕಲ್ಪನೆಯು ಅನನ್ಯತೆಗೆ ಬಂದದ್ದು ಆಯಾ ಪ್ರಾಂತೀಯ ಮಟ್ಟಗಳಲ್ಲಿಯೆ. ಅಂಥವುಗಳಲ್ಲಿ ಪ್ರಾಂತ್ಯಾಭಿಮಾನ, ಸ್ವಾಭಿಮಾನ, ಸ್ವಭಾಷೆ, ಸ್ವಜನ, ಸ್ವಸಂಸ್ಕೃತಿ, ಸ್ವಆಡಳಿತ, ಸ್ವದೇಶಾಭಿಮಾನ, ಸ್ವಾತಂತ್ರ್ಯಾಭಿಮಾನ, ದೇಶೀತನ (Nativeness) ಮೊದಲಾದ ಪರಿಕಲ್ಪನೆಗಳು ಮುಖ್ಯವಾದವು. ಇವು ಆಯಾ ಘಟಕಗಳಲ್ಲಿನ ಸಾಂಸ್ಕೃತಿಕ ಸಂಕಥನಗಳೂ ಹೌದು. ಉದಾಹರಣೆಗೆ, ಇಂಡಿಯಾದ ಸಂದರ್ಭದಲ್ಲಿ ಬಂಗಾಳ, ಬಿಹಾರ, ಒರಿಸ್ಸಾ, ಸಿಂಧ್, ಗುಜರಾತ್, ಮಹಾರಾಷ್ಟ್ರ, ಆಂಧ್ರ, ಕರ್ನಾಟಕ, ಕೇರಳ, ತಮಿಳುನಾಡು - ಮೊದಲಾದ ಭೂನೆಲೆಗಳಲ್ಲಿ ಅಭಿವ್ಯಕ್ತಗೊಂಡದ್ದನ್ನು ಗಮನಿಸಬಹುದು.

ಕನ್ನಡ ಮಾತನಾಡುತ್ತಿದ್ದ ಭಾಷಿಕರ ಮಟ್ಟಿಗೆ ಹೇಳುವುದಾದರೆ, ಅವರು ವಾಸಿಸುತ್ತಿದ್ದ ಭೂಪ್ರದೇಶಗಳಲ್ಲಿನ ಛಿದ್ರತೆಯ ಹಿನ್ನೆಲೆಯಲ್ಲಿ 'ಏಕೀಕರಣ'ದ ಪರಿಕಲ್ಪನೆಯನ್ನು

ಹಾಗೂ ಚಿಂತನೆಯನ್ನು ಹುಟ್ಟುಹಾಕಿದರು. ಈ ಪರಿಕಲ್ಪನೆಯ ಹುಟ್ಟು ಹಾಗೂ ನಿರ್ವಚನೆಯನ್ನು ಅಂದಿನ ಚಳವಳಿಗಾರರೆ ಬಳಕೆಗೆ ತಂದರು. ಅವರು ಏಕೀಕರಣ ಎಂದರೇನು? ಎಂಬ ಪ್ರಶ್ನೆಗೆ ಅಂದಿನ ಸ್ಥಿತಿಗತಿಗಳನ್ನೇ ಹಿನ್ನೆಲೆಯಾಗಿ ಇಟ್ಟುಕೊಂಡು-

> "ಈ ಹದಗೆಟ್ಟ ಪರಿಸ್ಥಿತಿಯನ್ನು ಬದಲಿಸಿ ನಾಡಿನ ಬೇರೆ ಬೇರೆ ತುಂಡುಗಳನ್ನು ಒಂದುಗೂಡಿಸಿ ಒಂದು ಪ್ರಕಾರದ ರಾಜಕೀಯ ಏಕತಂತ್ರತೆಯನ್ನು ತರುವುದೇ ಅರ್ಥಾತ್ ರಾಜಕೀಯ ದೃಷ್ಟಿಯಿಂದ ಒಂದೇ ಪ್ರಾಂತಿಕ ಆಡಳಿತಕ್ಕೆ ಒಳಪಡುವಂತೆ ವಿಕಲ ನಾಟಕವನ್ನು ಸಂಯೋಜಿಸುವುದೇ ಏಕೀಕರಣ"[3] - ಎಂದು ನಿರ್ವಚಿಸಿದ್ದಾರೆ.

ಇಲ್ಲಿ ಒಂದೇ ರಾಜಕೀಯ ಪರಿಧಿಯಲ್ಲಿ ಅಡಕವಾಗುವ ಇಂಗಿತ ಅಭಿವ್ಯಕ್ತಗೊಂಡಿದೆ. ಅಂದರೆ ತುಂಡಾಗಿದ್ದ ಕನ್ನಡದ ಭೌಗೋಳಿಕ ಪರಿಸರವು ಹಾಗೂ ಭಾಷಿಕರು ಒಂದೇ ಆಡಳಿತದಡಿಯಲ್ಲಿ ಬೆರೆತು ಆ ಮೂಲಕ ತಮ್ಮ ಅನನ್ಯತೆ-ಅಸ್ಮಿತೆ (Identity)ಗಳನ್ನು ಕಂಡುಕೊಳ್ಳುವುದೇ ಆಗಿದೆ. ಇಲ್ಲಿ ಭಾಷೆಯೇ ಪ್ರಧಾನವಾದುದು. ಆ ಮೂಲಕ ತಮ್ಮ ಸಾಹಿತ್ಯ, ಸಂಸ್ಕೃತಿಗಳನ್ನು ಗ್ರಹಿಕೆಗೆ ತೆಗೆದುಕೊಂಡು ಗುರುತಿಸಿಕೊಳ್ಳುವ ಪ್ರಯತ್ನಗಳು ನಡೆದವು. ಇದಕ್ಕೆ ಅಂಥ ಗಂಡಾಂತರಕಾರಿ ಹಾಗೂ ಆತಂಕದ ಪರಿಸ್ಥಿತಿಗಳು ಕನ್ನಡಿಗರಿಗೆ ಒದಗಿ ಬಂದಿದ್ದುದೇ ಕಾರಣ. ರಾಷ್ಟ್ರೀಯ ಚಳವಳಿಯ ಹಾಗೂ ಸಂಸ್ಥಾನೀ ಪ್ರತಿಭಟನೆಗಳ ಪ್ರಕ್ರಿಯೆಗಳು ನಡೆಯುತ್ತಿದ್ದ ಚಾರಿತ್ರಿಕ ಘಟ್ಟದಲ್ಲೇ 'ಏಕೀಕರಣ'ದ ಧಾರೆಯು ಒಟ್ಟೊಟ್ಟಿಗೆ ಸಾಗಿತ್ತು. ಇವು ಭಿನ್ನ ಧಾರೆಗಳಾಗಿ ಕಂಡುಬಂದರೂ ಆಡಳಿತಶಾಹಿಗೆ ಸವಾಲುಗಳನ್ನು ಒಡ್ಡುವಲ್ಲಿ ಒಂದೆ ತೆರೆನಾದ ಚಿಂತನೆಗಳನ್ನು ಮೂಡಿಸಿದ್ದವು. ಜೊತೆಗೆ ಇಂಡಿಯಾದ ಸ್ವಾತಂತ್ರ್ಯ ಗಳಿಕೆಯ ಆಶಯಕ್ಕೆ ಅಡಚಣೆಯಾಗದ ರೀತಿಯಲ್ಲಿ ಏಕೀಕರಣ ಚಳವಳಿ ಕಾರ್ಯಪ್ರವೃತ್ತವಾಗಿತ್ತು. ಒಟ್ಟಾರೆ 'ಏಕೀಕರಣ' ಪರಿಕಲ್ಪನೆಯ ಹುಟ್ಟು ಮತ್ತು ಬೆಳವಣಿಗೆ, ರಾಜಕೀಯ ಹಾಗೂ ಸಾಂಸ್ಕೃತಿಕ ಹಿನ್ನೆಲೆಗಳಲ್ಲಿ ಭಾಷಿಕ ಮಾಧ್ಯಮದ ಮೂಲಕ ಗುರುತಿಸಿಕೊಂಡ ಪ್ರಕ್ರಿಯೆ.

ವಿಭಜಿತ ಕನ್ನಡ ಭೂ ಪ್ರದೇಶಗಳಲ್ಲಿನ ಕನ್ನಡಿಗರಿಗೆ ತಮ್ಮನ್ನು ತಾವು ಗುರುತಿಸಿಕೊಳ್ಳಲು ಹಾಗೂ ಸಜ್ಜುಗೊಳ್ಳಲು ಅನೇಕ ಚಾರಿತ್ರಿಕ ಸನ್ನಿವೇಶಗಳು, ಒತ್ತಡಗಳು ನಿರ್ಮಾಣ ಆದವು. ಇಂಥ ಸ್ಥಿತಿಗತಿಗಳಿಗೆ ಆಂತರಿಕವಾಗಿಯಷ್ಟೇ ಅಲ್ಲದೆ ನೆರೆ-ಹೊರೆಯ ಪ್ರಾಂತ್ಯಗಳಲ್ಲಿ ನಡೆಯುತ್ತಿದ್ದ ಸ್ಥಿತ್ಯಂತರಗಳೂ ಕಾರಣ. ಅಲ್ಲಿನ ಚಿಂತನೆ - ಚಟುವಟಿಕೆಗಳು ಕನ್ನಡ

ಭಾಷಿಕರನ್ನು ಪ್ರಭಾವಿತರನ್ನಾಗಿಸದೆ ಇರಲಿಲ್ಲ. ಜೊತೆಗೆ ರಾಷ್ಟ್ರೀಯ ಹೋರಾಟದ ಎಚ್ಚರಗಳನ್ನು ಸಹ ಗಮನದಲ್ಲಿ ಇಟ್ಟುಕೊಂಡು ಅವು ಅಭಿವ್ಯಕ್ತ ಆಗುತ್ತಿದ್ದವು. ಕರ್ನಾಟಕದ ಏಕೀಕರಣ ಪರಿಕಲ್ಪನೆಯು ನೆರೆ-ಹೊರೆಗಳಲ್ಲಿ ಆಗುತ್ತಿದ್ದ ಸ್ಥಿತ್ಯಂತರಗಳ ಪರಿಣಾಮವೂ ಹೌದು. ಈ ಪರಿಣಾಮದ ಜೊತೆಗೆ ನಮ್ಮದೇ ಆದ ತುಡಿತ, ಸ್ಥಾನಿಕ ಜರೂರುಗಳು ಹೆಚ್ಚಿನ ಪಕ್ವತೆಯ ಕಡೆಗೆ ಕನ್ನಡಿಗರನ್ನು ಚಿಂತಿಸುವಂತೆ ಮಾಡಿದ್ದವು. ಈ ಎಲ್ಲದರ ಹಿನ್ನೆಲೆಯಲ್ಲಿಯೆ ಅಂದಿನ ಏಕೀಕರಣದ ಆರಂಭಿಕ ಘಟ್ಟ ಹಾಗೂ ಚಳವಳಿಯ ವಿಭಿನ್ನ ಹಂತಗಳನ್ನು ಚರ್ಚಿಸುವುದು ಅವಶ್ಯಕ. ಹೀಗೆ ಚರ್ಚಿಸುವಾಗ ಸಾಹಿತ್ಯಕ ಹಾಗೂ ಚಾರಿತ್ರಿಕ ಆಕರ-ಚಟುವಟಿಕೆಗಳನ್ನು ಗಮನದಲ್ಲಿರಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ.

ಆಧುನಿಕ ಇಂಡಿಯಾದ ಚರಿತ್ರೆಯಲ್ಲಿ ಕ್ರಿ.ಶ.೧೮೫೭ರ 'ಸಿಪಾಯಿದಂಗೆ'ಯ ಘಟನೆ ಬಹಳ ಮುಖ್ಯವಾದುದು. ಏಕೆಂದರೆ ಈ ಘಟನೆಯು ಇಂಡಿಯಾವು ರಾಜಕೀಯವಾಗಿ ಅನೇಕ ಸ್ಥಿತ್ಯಂತರಗಳಿಗೆ ಪಲ್ಲಟಗೊಳ್ಳಲು ಕಾರಣ ಆಯಿತು. ಬಹಳ ಮುಖ್ಯವಾದ ತಿರುವೆಂದರೆ 'ಈಸ್ಟ್ ಇಂಡಿಯಾ ಕಂಪನಿ'ಯ ಆಳ್ವಿಕೆ ಮೊಟಕುಗೊಂಡದ್ದು. ಈ ಬಗ್ಗೆ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಚರ್ಚೆ ಆಯಿತು. ಮೊಟ್ಟಮೊದಲ ಬಾರಿಗೆ ಇಂಡಿಯಾದಲ್ಲಿನ ಭಾಷಾವಾರು ಪ್ರಾಂತ್ಯಗಳ ರಚನೆ ಬಗ್ಗೆ ಇಲ್ಲಿ ಚರ್ಚಿಸಿದುದು ಗಮನಾರ್ಹ (೧೮೫೮ ರಲ್ಲಿ). ಅಂದು, ರಾಜಕಾರಣಿ ಜ್ಞಾನ್ ಬ್ರೈಟ್‌ನು ತನ್ನ ಭಾಷಣದಲ್ಲಿ ಭಾಷೆ ಮತ್ತು ಭೌಗೋಳಿಕ ಪರಿಸರದ ಆಧಾರದ ಮೇಲೆ ಇಂಡಿಯಾವನ್ನು ಐದು ಭಾಗಗಳನ್ನಾಗಿ ವಿಂಗಡಿಸಬೇಕು ಎಂದು ಅಭಿಪ್ರಾಯಪಟ್ಟ. ಆದರೆ ಆಡಳಿತವು ಕೇಂದ್ರೀಕೃತ ಆಗಬಾರದು ಎಂಬ ಎಚ್ಚರಿಕೆಯನ್ನೂ ನೀಡಿದ. ಇಂಥ ಕೆಲವು ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಬ್ರಿಟನ್ನಿನ ರಾಣಿ ವಿಕ್ಟೋರಿಯಾಳು ಕ್ರಿ.ಶ.೧೮೫೮ ರಲ್ಲಿ ಸನ್ನದೊಂದನ್ನು ಹೊರಡಿಸಿದಳು. ಇದರ ಅನ್ವಯ ಇಂಡಿಯಾವು ಆಕೆಯ ನೇರ ಹಿಡಿತಕ್ಕೆ ಬಂದಿತು. ಕ್ರಿ.ಶ.೧೮೫೮ ರ ಸನ್ನದಿನಲ್ಲಿ ಇಂಡಿಯಾದ ರಾಜ-ಮಹಾರಾಜರ ಹಕ್ಕುಗಳು, ಗೌರವ-ಪ್ರತಿಷ್ಠೆಗಳಿಗೆ ಧಕ್ಕೆ ಬಾರದಂತೆ ನಡೆದುಕೊಳ್ಳುವ ಭರವಸೆ ನೀಡಲಾಗಿತ್ತು. ಅಲ್ಲದೆ ಜನತೆಯ ಮತ-ಧರ್ಮಗಳ ಬಗ್ಗೆ ಸಹಿಷ್ಣುತೆ, ನ್ಯಾಯಯುತವಾದ ಆಡಳಿತ, ಸಿಬ್ಬಂದಿ ನೇಮಕ, ಸಮಾನತೆಯ ಹಲವು ವಿಚಾರಗಳನ್ನು ಚರ್ಚಿಸಲಾಗಿತ್ತು.[೨]

ಭಾಷೆಯನ್ನೇ ಮೂಲ ಆಧಾರವನ್ನಾಗಿ ಇಟ್ಟುಕೊಂಡು ಇಂಡಿಯಾವನ್ನು ವಿಭಜಿಸಬೇಕು ಎಂಬ ಚಿಂತನೆಯನ್ನು ವ್ಯಕ್ತಪಡಿಸಿದ ಬ್ರಿಟಿಷ್ ಆಳರಸರಲ್ಲಿ ಜ್ಞಾನ್ ಬ್ರೈಟ್‌ನೆ

ಮೊದಲಿಗ (೧೮೫೮ ರಲ್ಲಿ). ಇದನ್ನು ಬಿಟ್ಟರೆ ಮತ್ತೆ ಆ ಥರದ ಧ್ವನಿ ಕೇಳಬರತೊಡಗಿದ್ದು ಕ್ರಿ.ಶ. ೧೮೭೪ ರಲ್ಲಿಯೇ. ಆದರೆ ಈ ಭಾರಿ ಭಾಷಾನ್ವಯದ ಕೂಗು ಕೇಳಿ ಬಂದದ್ದು ಭಾರತೀಯರಿಂದಲೇ. ಆರಂಭದಲ್ಲಿ ಬಂಗಾಳ, ಬಿಹಾರ, ಒರಿಸ್ಸಾ (ಉತ್ಕಲ)ಗಳು ಒಂದೇ ಪ್ರಾಂತ್ಯದಲ್ಲಿ ವಿಲೀನ ಆಗಿದ್ದವು. ಅಸ್ಸಾಂ ಮಾತ್ರ ಪ್ರತ್ಯೇಕ ಚೀಫ್ ಕಮೀಷನರ್‌ನೊಬ್ಬನ ಆಳ್ವಿಕೆಗೆ ಒಳಪಟ್ಟಿತ್ತು. ಆದರೆ ೧೮೭೪ ರಲ್ಲಿ ಬಂಗಾಳ ಪ್ರಾಂತ್ಯದಲ್ಲಿದ್ದ ಸಿಲ್ಹೆಟ್ ಜಿಲ್ಲೆಯನ್ನು ಬ್ರಿಟಿಷರು ಅಸ್ಸಾಮಿನ ಆಡಳಿತ ಪರಧಿಗೆ ಸೇರಿಸಿದರು. ಇಲ್ಲಿಂದಲೇ ಭಾಷಾ ಚಳವಳಿಗಳು ಆರಂಭಗೊಂಡದ್ದು. ಅಂದರೆ ಅಸ್ಸಾಮಿ ಭಾಷಿಕರು ಸಿಲ್ಹೆಟನ್ನು ಸೇರಿಸಿದ್ದಕ್ಕೆ ಅಂತರಂಗದಲ್ಲಿಯೆ ಅಸಮಾಧಾನವನ್ನು ವ್ಯಕ್ತಪಡಿಸಲು ಆರಂಭಿಸಿದ್ದರು.[೪] ಇದರಿಂದ ಸಿಲ್ಹೆಟಿನ ಬಂಗಾಳಿಗಳು (ಬಂಗಾಳಿ ಭಾಷಿಕರು) ಮತ್ತೆ ಬಂಗಾಳ ಪ್ರಾಂತ್ಯಕ್ಕೆ ಆಡಳಿತಾತ್ಮಕವಾಗಿ ಹಿಂದಿರುಗಲು ಹಾತೊರೆದರು. ಇವರಲ್ಲಿ ಹಿಂದೂ ಮತ್ತು ಮುಸ್ಲಿಮ್ ಎರಡೂ ಧರ್ಮಗಳಿಗೆ ಸೇರಿದ ಜನರಿದ್ದು, ತಮ್ಮ ಬೇಡಿಕೆಯನ್ನು ಸರಕಾರದ ಮುಂದಿಟ್ಟರು.

ದಕ್ಷಿಣ ಭಾರತದಲ್ಲಿ ಅದರಲ್ಲೂ ಕನ್ನಡ ಮಾತನಾಡುತ್ತಿದ್ದ ಭೂಪ್ರದೇಶಗಳಲ್ಲಿ ಈ ರೀತಿಯ ಭಾಷಾ ಪ್ರಕ್ರಿಯೆಗಳು ಭಿನ್ನ ನಿಲುವುಗಳನ್ನು ಕಂಡಿದ್ದವು. ಅಂದರೆ ಮರಾಠಿ, ಗುಜರಾತಿ, ಬಂಗಾಳಿ ಭಾಷೆಗಳ ತೀವ್ರ ಒತ್ತಡಗಳಿಂದ ಮುಂಬಯಿ-ಕರ್ನಾಟಕದ ಕನ್ನಡಿಗರು ಬಂಗಾಳದಲ್ಲಿನ ಭಾಷಾ ಹಿನ್ನೆಲೆಯ ಚಟುವಟಿಕೆಗಳನ್ನು ಗಮನಿಸದೆ ಇರಲಿಲ್ಲ. ಮರಾಠಿಯಿಂದ ಕನ್ನಡ ಭಾಷೆ, ಸಾಹಿತ್ಯ-ಸಂಸ್ಕೃತಿಗಳಿಗೆ ಹೆಚ್ಚಿನ ಆಘಾತವಾಗುತ್ತಿದ್ದುದು ಈ ಭಾಗದವರಿಗೆ ಮಾತ್ರ. ಹೀಗಾಗಿ ಭಾಷಾಭಿಮಾನದ ಮೊದಲ ಬೀಜಾಂಕುರ ಆದದ್ದು **ಧಾರವಾಡವನ್ನೊಳಗೊಂಡ** ಈ ನೆಲದಲ್ಲಿ. ಕನ್ನಡಿಗರ ಶ್ರೇಯೋಭಿವೃದ್ಧಿಗಾಗಿ **೨೦.೭.೧೮೯೦** ರಂದು ಧಾರವಾಡದಲ್ಲಿ ಸಂಸ್ಥೆಯೊಂದು ಹುಟ್ಟಿಕೊಂಡಿತು. ಅದೇ **ಕರ್ನಾಟಕ ವಿದ್ಯಾವರ್ಧಕ ಸಂಘ**. ಇದರ ಸ್ಥಾಪನೆಗೆ ಮೂಲ ಕಾರಣಕರ್ತರು **ರಾ.ಹ. ದೇಶಪಾಂಡೆ** ಅವರು. ಇವರು, ಸಂಘದ ಹುಟ್ಟು ಹಾಗೂ ಬೆಳವಣಿಗೆಯನ್ನು ಕುರಿತಂತೆ-

> "ಕನ್ನಡ ಭಾಷೆಯ ದೀನ ಸ್ಥಿತಿಯನ್ನು ದೂರ ಮಾಡುವುದಕ್ಕಾಗಿ ಕನ್ನಡ ಜನರ ಸಹಾಯದಿಂದ ಒಂದು ಸಂಘವನ್ನು ಸ್ಥಾಪಿಸಬೇಕೆಂಬ ವಿಚಾರವು ನನ್ನ ಮನಸ್ಸಿನಲ್ಲಿ ಸನ್ ೧೮೮೭ ನೆಯ ಇಸವಿಯಲ್ಲಿ ಹುಟ್ಟಿತು. ಅಂದಿನಿಂದ ಈ ಹೊತ್ತಿನ ತನಕ ಅದೇ ಪ್ರಯತ್ನದಲ್ಲಿ ತೊಡಗಿರುತ್ತೇನೆ. ....... ಎಲ್ಲ ಕನ್ನಡಿಗರು ಸ್ವಭಾಷೆಯ ಅಭಿಮಾನ ಹಿಡಿದು, ಈ

ಹಿಂದಿಯನ್ನೇ ಮಾತನಾಡುತ್ತಿದ್ದ ಬಿಹಾರಿಗಳದು ಇನ್ನೊಂದು ರೀತಿಯ ಸಮಸ್ಯೆ. ಬಂಗಾಳಿ, ಒರಿಯಾ ಭಾಷೆಗಳನ್ನು ಆಡುತ್ತಿದ್ದ ಬಂಗಾಳ ಪ್ರೆಸಿಡೆನ್ಸಿಯಲ್ಲಿ ಬಿಹಾರಿಗಳು ತಮ್ಮತನವನ್ನು ಕಾಯ್ದುಕೊಳ್ಳುವುದು ಸಾಧ್ಯ ಇರಲಿಲ್ಲ. ಆದ್ದರಿಂದ ಇವರು ತಮ್ಮನ್ನು ಬಂಗಾಳದಿಂದ ಪ್ರತ್ಯೇಕಿಸಿ ಬೇರೆ ಪ್ರಾಂತ್ಯವನ್ನೇ ರಚಿಸಬೇಕೆಂಬ ಬೇಡಿಕೆಯನ್ನು ಮುಂದಿಟ್ಟು ಚಳವಳಿ ತೀವ್ರಗೊಳಿಸಿದರು. ಬಿಹಾರಿಗಳ ನೇತೃತ್ವವನ್ನು ವಹಿಸಿದ **ಮಹೇಶ ನಾರಾಯಣರು** ಹಲವು ನೆಲೆಗಳಲ್ಲಿ ಪ್ರತಿಕ್ರಿಯಿಸಿದ್ದೂ ಉಂಟು. ೧೯೦೨ ರಲ್ಲಿ ಒರಿಯಾ ಭಾಷಿಕರಿಂದ ಸಹಿಗಳನ್ನು ಸಂಗ್ರಹಿಸಿ ಕೂಡಲೇ ಒಂದೇ ಪ್ರಾಂತ್ಯ ಮಾಡಬೇಕು ಎಂದು ಗೌರ್ನರ್ ಜನರಲ್ **ಲಾರ್ಡ್ ಕರ್ಜನ್ನನಿಗೆ** ಮನವಿ ಸಲ್ಲಿಸಲಾಯಿತು. ಈ ಮಧ್ಯೆ ೧೯೦೩ ರಲ್ಲಿ ಒರಿಯಾಗಳು **ಉತ್ಕಲ ಐಕ್ಯ ಪರಿಷತ್** (Utkal Union Conference) ಎಂಬ ಸಂಘಟನೆಯನ್ನು ಕಟ್ಟಿದರು. ಇದರಿಂದ ಇವರ ಚಳವಳಿ ಒಂದು ವ್ಯವಸ್ಥಿತ ರೂಪಕ್ಕೆ ಬಂದಿತು. ಅಲ್ಲದೆ ಭಾಷಾತತ್ವವನ್ನೇ ಮೂಲ ಆಧಾರವನ್ನಾಗಿ ಇಟ್ಟುಕೊಂಡು ಒರಿಯಾ ಚಳವಳಿಯ ಬಗ್ಗೆ ಕೃತಿಯೊಂದನ್ನು ಪ್ರಕಟಿಸಿ ಹಂಚಿದರು. ಅಂಕಿ-ಅಂಶಗಳಿಂದ ಕೂಡಿದ್ದ ಈ ಕೃತಿ ಭಾಷಾ ಚಳವಳಿಯ ಹಿನ್ನೆಲೆಯಲ್ಲಿ ಬಹುಶಃ ಮೊದಲನೆಯದು. ಇದರಿಂದ ಜನರಲ್ಲಿ ಪ್ರೇರಣೆ ಹೆಚ್ಚಾಯಿತು.

ಈ ಸಂದರ್ಭದಲ್ಲಿ ಅಂದರೆ ೧೯೦೩ ರ ವೇಳೆಗೆ **ಉತ್ತರ ಕರ್ನಾಟಕದಲ್ಲಿ** ಭಿನ್ನ ರೀತಿಯ ಭಾಷಾ ಚಿಂತನೆಗಳು ಆರಂಭಗೊಂಡಿದ್ದವು. ಕರ್ನಾಟಕ ವಿದ್ಯಾವರ್ಧಕ ಸಂಘವು ಇದೇ ವೇಳೆಯಲ್ಲಿ ಸಭೆ-ಸಮಾರಂಭಗಳನ್ನು ಏರ್ಪಡಿಸಿ ಭಾಷಾ ಪ್ರಜ್ಞೆಯನ್ನು ಮೂಡಿಸುತ್ತಿತ್ತು. ಅಂಥ ಒಂದು ಸಮಾರಂಭದಲ್ಲಿ **ಬೆನಗಲ್ ರಾಮರಾಯರು** ಮಾಡಿದ ಭಾಷಣ ಮುಖ್ಯವಾದುದು. ಅವರು **ಮದ್ರಾಸ್** ಹಾಗೂ **ಉತ್ತರ ಕರ್ನಾಟಕದ** ಕನ್ನಡಿಗರು ಒಂದುಗೂಡಬೇಕಾದ ಅನಿವಾರ್ಯತೆ, ಏಕೀಕರಣ ಕಲ್ಪನೆಯನ್ನು ಮೊದಲ ಬಾರಿಗೆ ಹುಟ್ಟುಹಾಕಿದರು. ಇಂಥ ಎಚ್ಚರವನ್ನು ಉಂಟುಮಾಡಿದ ಮೊಟ್ಟಮೊದಲ ಭಾಷಣ ಇದಾಗಿದ್ದು, ಜನರನ್ನು ಏಕೀಕರಣದ ಚಿಂತನೆಗೆ ಸಜ್ಜುಗೊಳಿಸಿತು.

ಇಂಡಿಯಾವನ್ನು ಆಂಗ್ಲರಿಂದ ಮುಕ್ತಗೊಳಿಸಲು ಇಂಡಿಯಾದಾದ್ಯಂತ ಹಲವು ರೀತಿಯ ಪ್ರತಿಭಟನೆಗಳು ನಡೆಯುತ್ತಿದ್ದ ಚಾರಿತ್ರಿಕ ಘಟ್ಟವೂ ಇದೇ ಆಗಿತ್ತು. ಅದರಲ್ಲೂ ಬಂಗಾಳಿಗಳು ಕ್ರಾಂತಿಕಾರಿ ಚಟುವಟಿಕೆಗಳಿಗೂ ಕೈಹಾಕಿದ್ದರು. ಈ ಸವಾಲುಗಳನ್ನು ಎದುರಿಸುವುದು ಬ್ರಿಟಿಷ್ ಆಡಳಿತಶಾಹಿಗೆ ಸುಲಭವಿರಲಿಲ್ಲ. ಆದ್ದರಿಂದ ಇವರನ್ನು

> ಸಂಘದ ಕೆಲಸವನ್ನು ನೆರವೇರಿಸಲಿಕ್ಕೆ ತಮ್ಮ ಕೈಲಾದ ಮಟ್ಟಿಗೆ ತನು-ಮನ-ಧನಗಳಿಂದ ಸಹಾಯ ಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ.''[೫]

- ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಸಂಘವು ೧೮೯೬ ರ ನವೆಂಬರ್ ವೇಳೆಗೆ ತನ್ನ ಮುಖವಾಣಿಯನ್ನಾಗಿ **ವಾಗ್ಭೂಷಣ** ಎಂಬ ಮಾಸಿಕವನ್ನು ಹೊರಡಿಸಿತು. ಇದರಲ್ಲಿ ಕನ್ನಡ ನಾಡು-ನುಡಿ-ಸಂಸ್ಕೃತಿಗಳ ಪ್ರಚಾರ, ಜಾಗೃತಿಗೆ ಆದ್ಯತೆ ನೀಡಲಾಯಿತು. ಇದು ಆರಂಭದಲ್ಲಿ ಅಲ್ಲದಿದ್ದರೂ ಕ್ರಮೇಣ 'ಕರ್ನಾಟಕ ವಿದ್ಯಾವರ್ಧಕ ಸಂಘ'ವು ಸಮಸ್ತ ಕನ್ನಡಿಗರ ಸಂಸ್ಥೆ ಎಂಬ ಅರಿವನ್ನು ತಂದುಕೊಟ್ಟಿತು. ಇದಕ್ಕೂ ಮೊದಲು ೧೮೯೩ ರಲ್ಲಿ (ವಾಗ್ಭೂಷಣ ಪ್ರಕಟ ಆಗುವುದಕ್ಕೆ ಮೊದಲು) **ಕರ್ನಾಟಕ ಭಾಷೋಜ್ಜೀವಿನಿ ಸಭಾ** ಎಂಬ ಸಂಸ್ಥೆ ನಾಡು-ನುಡಿ ಚಿಂತನೆಗಳಿಗಾಗಿ ಅಸ್ತಿತ್ವಕ್ಕೆ ಬಂದಿತ್ತು.

ಭಾಷಾಭಿಮಾನದ ಅಥವಾ ಪ್ರಾಂತ್ಯಾಭಿಮಾನದ ದೃಷ್ಟಿಯಲ್ಲಿ ಬಂಗಾಳಿ ಭಾಷಿಕರು ತಮ್ಮದೇ ಆದ ಸ್ಥಾನವನ್ನು ಗುರುತಿಸಿಕೊಂಡಿದ್ದರು. ಆ ಮೂಲಕವೇ ಅವರು ತಮ್ಮ ಸ್ವಾತಂತ್ರ್ಯಾಭಿಮಾನವನ್ನು ವ್ಯಕ್ತಪಡಿಸಿದ್ದು. ಬಂಗಾಳಿಗಳು ಈ ಮಧ್ಯೆ "ವಿವಿಧೋಪಾಯಗಳಿಂದ ವಂಗ ಭಾಷೆಯನ್ನೂ, ಸಾಹಿತ್ಯಗಳನ್ನೂ ಪರಿಶೀಲಿಸಿ ಉನ್ನತಿಗೆ ತರುವ 'ಆಶಯದಿಂದ' ವಂಗೀಯ ಸಾಹಿತ್ಯ ಪರಿಷತ್'' ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದ್ದರು (೧೮೯೪ ರ ವೇಳೆಗೆ). ಈ ಸಂಸ್ಥೆಯು ವಂಗ (ಬಂಗಾಳಿ) ಭಾಷೆಯಲ್ಲಿ ವ್ಯಾಕರಣ, ನಿಘಂಟು, ವೈಜ್ಞಾನಿಕ, ದಾರ್ಶನಿಕ ಶಬ್ದಗಳ ಪಾರಿಭಾಷಿಕ ಪದಕೋಶ, ಇತಿಹಾಸ, ಕಾವ್ಯ ಮೊದಲಾದ ವಿಷಯಗಳಲ್ಲಿ ಕೃತಿಗಳನ್ನು ಪ್ರಕಟಿಸುವ ಯೋಜನೆಗಳನ್ನು ಹೊಂದಿತ್ತು. ಬಂಗಾಳಿ ಭಾಷಿಕರು ನಾಡು-ನುಡಿಗಳ ಬಗ್ಗೆ ಜಾಗೃತಿ ಮೂಡಿಸುವ ಸಲುವಾಗಿ ಈ ಸಂಸ್ಥೆಯ ಮುಖವಾಣಿಯಾಗಿ **ಸಾಹಿತ್ಯ ಪರಿಷತ್ಪತ್ರಿಕಾ** ಎಂಬ ಪತ್ರಿಕೆಯನ್ನು ಹೊರಡಿಸಿದರು.[೬]

ಈ ರೀತಿಯ ಭಾಷಿಕ ಚಳವಳಿಗೆ ಒಂದು ಸಂಘಟಿತ ರೂಪವನ್ನು ಕೊಟ್ಟವರ ಪೈಕಿ **ಒರಿಯಾಗಳೇ** ಮೊದಲಿಗರು. ಛಿದ್ರವಾಗಿದ್ದ ಒರಿಯಾ ಭಾಷಿಕರನ್ನು ಒಂದೇ ಆಡಳಿತದಡಿಯಲ್ಲಿ ತರುವ ಪ್ರಯತ್ನವನ್ನು ಇವರು ಮಾಡಿದರು. ಈ ಪ್ರಯತ್ನದಲ್ಲಿ ಹಾಗೂ ಚಳವಳಿ ತೀವ್ರತೆಯನ್ನು ಪಡೆಯುವಲ್ಲಿ ಮುಖ್ಯ ಪಾತ್ರ ನಿರ್ವಹಿಸಿದವರು ಬಲಸೋರಿನ **ರಾಜಾ ಬೈಕುಂಠನಾಥದೇ** ಹಾಗೂ **ಬಿಚಿತ್ರಾನಂದ ಪಟ್ನಾಯಕ್** ಪ್ರಮುಖರು. ಈ ಸಂದರ್ಭದಲ್ಲಿ ಒರಿಸ್ಸಾದ ಕಮೀಷನರ್ ಆಗಿದ್ದ **ಕುಕ್** ಎಂಬಾತನ ಬೆಂಬಲವೂ ದೊರೆತಿತ್ತು.

ಹತ್ತಿಕ್ಕಲು ತಮ್ಮ ಮೂಲಭೂತ ನೀತಿಯಾದ 'ಒಡೆದು ಆಳುವ' (Divide and rule policy) ಧೋರಣೆಯನ್ನೇ ಅನುಸರಿಸಿತು. ಲಾರ್ಡ್ ಕರ್ಜನ್‌ನು ಸುಮಾರು ಎಂಟು ಕೋಟಿ ಜನರಿದ್ದ ಬಂಗಾಳ ಪ್ರಾಂತ್ಯವನ್ನು ೧೬.೧೦.೧೯೦೫ ರಂದು ಇಬ್ಭಾಗ ಮಾಡಿದನು. **ಬಂಗಾಳದ ವಿಭಜನೆ** (ವಂಗಭಂಗ)ಯ ಹಿಂದೆ ಇದ್ದ ದುರುದ್ದೇಶವನ್ನು ವೈಸರಾಯ್ **ಲಾರ್ಡ್ ಕರ್ಜನ್** ಈ ರೀತಿ ಸ್ಪಷ್ಟಪಡಿಸಿದ್ದಾನೆ.

> "ಬಂಗಾಳಿಗಳು ತಮ್ಮನ್ನು ಒಂದು ರಾಷ್ಟ್ರವೆಂದು ಕರೆದುಕೊಳ್ಳಲು ಇಷ್ಟಪಡುತ್ತಾರೆ. ಮುಂದೆ ಒಂದು ದಿನ ಬ್ರಿಟಿಷರನ್ನು ಹೊರದೂಡಿದ ಮೇಲೆ ಒಬ್ಬ ಬಂಗಾಳಿ ಬಾಬುವನ್ನು ಕಲ್ಕತ್ತೆಯ ಗೌರ್ನಮೆಂಟ್ ಹೌಸಿನಲ್ಲಿ ಪ್ರತಿಷ್ಠಾಪನೆ ಮಾಡುವ ತಮ್ಮ ಕನಸು ಕಾಣುತ್ತಾರೆ. ತಮ್ಮ ಕನಸು ಕೈಗೂಡದಂತೆ ಅಡಚಣೆ ಮಾಡುವ ಎಲ್ಲ ಕ್ರಮಗಳನ್ನೂ ಅವರು ತೀವ್ರವಾಗಿ ತಿರಸ್ಕರಿಸುತ್ತಾರೆ. ನಾವು ಈಗ ಅವರ ಹಾತೊರೆತಕ್ಕೆ ಭಾಗುವಷ್ಟು ನಿರ್ಬಲರಾದರೆ ಮುಂದೆ ಎಂದೂ ಬಂಗಾಳವನ್ನು ಛಿದ್ರಗೊಳಿಸುವುದು ಇಲ್ಲವೇ ಕುಗ್ಗಿಸುವುದು ಸಾಧ್ಯವಾಗುವುದಿಲ್ಲ. ಭಾರತದ ಪೂರ್ವ ಭಾಗದಲ್ಲಿ ಈಗಾಗಲೇ ಸಾಕಷ್ಟು ಪ್ರಬಲವಾಗಿರುವ ಮತ್ತು ಮುಂದೆ ಹೆಚ್ಚು ಹೆಚ್ಚು ಆತಂಕ ಒಡ್ಡಬಲ್ಲ ಒಂದು ಶಕ್ತಿಯನ್ನು ಬಿಗಿಗೊಳಿಸಿ, ಗಟ್ಟಿ ಮಾಡಿದಂತಾಗುತ್ತದೆ."[೬]

'ವಂಗಭಂಗ' ಘಟನೆಯು ಭಾಷಾ ಪ್ರಧಾನ ಚಳವಳಿಗಳ ಹಿನ್ನೆಲೆಯಲ್ಲಿ ಬಹಳ ಮಹತ್ವದ್ದು. ಏಕೆಂದರೆ ಬಂಗಾಳವು ಇಡಿ ಇಂಡಿಯಾದಲ್ಲೇ ರಾಜಕೀಯ ಜಾಗೃತಿ ಪಡೆದ ಪ್ರಮುಖ ಕೇಂದ್ರ ಆಗಿತ್ತು. ಆಂಗ್ಲ ಶಿಕ್ಷಣಕ್ಕೆ ಇಲ್ಲಿನ ಮೇಲ್ವರ್ಗದ ಜನ ತಮ್ಮನ್ನು ತಾವು ಮೊದಲು ಒಳಗು ಮಾಡಿಕೊಂಡಿದ್ದರು. ಆದ್ದರಿಂದಲೇ ಹೆಚ್ಚಿನ ಸಂಖ್ಯೆಯಲ್ಲಿ ರಾಜಕಾರಣಿ ಗಳು, ಸಮಾಜ ಸುಧಾರಕರು, ಬುದ್ಧಿಜೀವಿಗಳು, ಕ್ರಾಂತಿಕಾರಿಗಳು ಈ ಪ್ರದೇಶದಿಂದ ಗುರುತಿಸಿಕೊಂಡದ್ದು. ಅಲ್ಲದೆ ಬಂಗಾಳವು ಅಂದು ಇಂಡಿಯಾದ ರಾಜಧಾನಿಯೂ ಹೌದು. ಈ ಪ್ರಾಂತ್ಯವನ್ನು ಪೂರ್ವ ಮತ್ತು ಪಶ್ಚಿಮ ಘಟಕಗಳನ್ನಾಗಿ ಛಿದ್ರ ಮಾಡಲಾಯಿತು. ಪೂರ್ವ ಬಂಗಾಳಕ್ಕೆ **ಢಾಕಾ**ವನ್ನು ರಾಜಧಾನಿಯನ್ನಾಗಿ ಮಾಡಿ (ಇಂದಿನ ಬಾಂಗ್ಲಾ ದೇಶ) ಅಸ್ಸಾಂನ್ನು ಸೇರಿಸಿದರು. ಪಶ್ಚಿಮ ಬಂಗಾಳಕ್ಕೆ **ಕಲ್ಕತ್ತ**

ನಗರವನ್ನು ರಾಜಧಾನಿಯನ್ನಾಗಿಸಿ ಒರಿಸ್ಸಾ, ಬಿಹಾರಗಳನ್ನು ಸೇರಿಸಿದರು. ಮುಸ್ಲಿಂ ಮತಬಾಂಧವರೆ ಹೆಚ್ಚು ಇದ್ದ ಪೂರ್ವ ಬಂಗಾಳವನ್ನು ಹಿಂದೂಗಳಿಂದ (ಪಶ್ಚಿಮ ಬಂಗಾಳ) ಬೇರ್ಪಡಿಸುವ ಕುಟಿಲ ನೀತಿಗೆ ಎರಡೂ ಕಡೆಗಳಿಂದಲೂ ತೀವ್ರ ವಿರೋಧ ವ್ಯಕ್ತಗೊಂಡಿತು. ಈ ಎರಡು ಭಾಗಗಳಿಗೂ ಇಬ್ಬರು ಲೆಫ್ಟಿನೆಂಟ್ ಗೌರ್ನರ್‌ಗಳನ್ನು ನೇಮಕ ಮಾಡಲಾಯಿತು. ಧರ್ಮದ ಹೆಸರಿನಲ್ಲೇ ಕೋಮುವಾದವನ್ನು ಬಿತ್ತಲು ಯತ್ನಿಸಿದ ಬ್ರಿಟಿಷ್ ಆಳರಸರಿಗೆ ಬಂಗಾಳಿ ಭಾಷಿಕರು ಭಾಷೆಯೊಂದರಿಂದ ಒಗ್ಗಟ್ಟನ್ನು ವ್ಯಕ್ತಪಡಿಸಿದ್ದು ಆಶ್ಚರ್ಯವನ್ನು ಉಂಟು ಮಾಡಿತು. ಇವರು ಭಾಷೆಯೊಂದರಿಂದ ಪ್ರಾಂತ್ಯಾಭಿಮಾನ, ಸ್ವಾತಂತ್ರ್ಯಾಭಿಮಾನವನ್ನು ವ್ಯಕ್ತಪಡಿಸಲಾರಂಭಿಸಿದರು. ೧೬.೧೦.೧೯೦೫ ರ ವಿಭಜಿತ ದಿನವನ್ನು ರವೀಂದ್ರನಾಥ ಠಾಗೋರ್, ರಾಮೋಂದ್ರ ಸುಂದರ ತ್ರಿವೇದಿ ಮೊದಲಾದವರು ಸಹೋದರತ್ವದ ಸೂಚನೆಯಾಗಿ ರಾಖಿಯನ್ನು ಕಟ್ಟಿಕೊಳ್ಳುವ 'ಭಾವೈಕ್ಯತೆಯ ಚಳವಳಿ'ಯನ್ನಾಗಿ ಸಾರಿದರು. ಅಲ್ಲದೆ ಸಂತಾಪ ಸೂಚಕವಾಗಿ ಒಲೆಯನ್ನು ಹೊತ್ತಿಸದೆ ಉಪವಾಸವನ್ನು ಆಚರಿಸಲು ಕರೆಕೊಟ್ಟರು. ಈ ಮಧ್ಯೆ ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ, ಸ್ವರಾಜ್ಯದ ಘೋಷಣೆಗಳು ಹೆಚ್ಚು ಪ್ರಚಲಿತಗೊಳ್ಳುತ್ತಿದ್ದವು. 'ವಂಗಭಂಗ' ಘಟನೆಯನ್ನು ವಿರೋಧಿಸಿ ಸುಮಾರು ೭೦,೦೦೦ ಜನರ ಸಹಿಯಿರುವ ಮನವಿಯೊಂದನ್ನು ಬ್ರಿಟಿಷ್ ಪಾರ್ಲಿಮೆಂಟಿಗೆ ಕಳುಹಿಸಿಕೊಡಲಾಯಿತು.[೮]

೧೯೦೫ ರಲ್ಲಿಯೇ ಜಾಗತಿಕವಾಗಿ ಹಾಗೂ ಯುರೋಪಿಯನ್ ರಾಷ್ಟ್ರಗಳಲ್ಲಿಯೇ ಪ್ರಬಲ ಅನ್ನಿಸಿಕೊಂಡಿದ್ದ ರಷ್ಯಾವನ್ನು ಜಪಾನ್‌ನಂಥ ಚಿಕ್ಕದೇಶ ಯುದ್ಧದಲ್ಲಿ ಸೋಲಿಸಿತು. ಈ ಗೆಲುವು ವಸಾಹತುಗಳಾಗಿದ್ದ ಏಷ್ಯಾದ ರಾಷ್ಟ್ರಗಳಿಗೆ ಹೆಚ್ಚಿನ ಹುರುಪನ್ನು ತಂದುಕೊಟ್ಟಿತ್ತು. ಈ ಸನ್ನಿವೇಶದ ಬಂಗಾಳ ವಿಭಜನೆಯ ಘಟನೆ, ರಾಷ್ಟ್ರೀಯ ಹೋರಾಟಕ್ಕೆ ಭಾರತೀಯರನ್ನು ಮಾನಸಿಕವಾಗಿ ಸಜ್ಜುಗೊಳಿಸಿತು. ಈ ಘಟನೆಯು ಬಹಳ ಮುಖ್ಯ ಅನ್ನಿಸುವುದು ಪ್ರಾಂತ್ಯಾಭಿಮಾನ, ಭಾಷಾಭಿಮಾನ, ಸ್ವಾತಂತ್ರ್ಯದ ಬಯಕೆಯ ಬಗೆಗೆ ಚಳವಳಿ-ಚಿಂತನೆಗಳನ್ನು ಹೊಸ ದಿಕ್ಕಿನೆಡೆಗೆ ಕೊಂಡೊಯ್ದುದ್ದರಿಂದ.

ಈ ಚಳವಳಿ-ಚಿಂತನೆಗಳು ಕನ್ನಡಿಗರ ಮೇಲೆ ಪ್ರಭಾವ ಬೀರದೆ ಇರಲಿಲ್ಲ. ಅಂದು ವಿದ್ಯಾವರ್ಧಕ ಸಂಘದ 'ವಾಗ್ಭೂಷಣ'ದಲ್ಲಿ ಕನ್ನಡ-ಕರ್ನಾಟಕ ಪರ ಸಾಹಿತ್ಯ ಪ್ರಕಟ ಆಗುತ್ತಿತ್ತು. ಬಂಗಾಳ ವಿಭಜನೆಯ ಕಾವು ಕನ್ನಡಿಗರ ಮೇಲೂ ಆಯಿತು. ಪರಿಣಾಮವೇ ಆಲೂರ ವೆಂಕಟರಾಯರ ೧೯೦೭ ರ ಫೆಬ್ರವರಿ ಸಂಚಿಕೆಯಲ್ಲಿನ ಲೇಖನ. ಈ

ಲೇಖನದಲ್ಲಿ ಅವರು 'ಕನ್ನಡಿಗರ ಅಳಿವು-ಉಳಿವುಗಳು ಏಕೀಕರಣದಿಂದ ಮಾತ್ರ ಸಾಧ್ಯ' ಎಂಬುದನ್ನು ಮನವರಿಕೆ ಮಾಡಿಕೊಟ್ಟರು. ಇದು ಏಕೀಕರಣದ ಬಗ್ಗೆ ಕನ್ನಡಿಗರು ಆಲೋಚಿಸುವಂತೆ ಮಾಡಿದ ಮೊಟ್ಟಮೊದಲ ಲೇಖನವೂ ಹೌದು. ಅಲ್ಲದೆ ಕಾರ್ಯ ಪ್ರವೃತ್ತರಾಗುವಂತೆ ಪ್ರೇರೇಪಿಸಿದ ಲೇಖನ.

೧೯೦೭ ರ ಜೂನ್ ೨ ಮತ್ತು ೩ ನೆಯ ದಿನಗಳಂದು ಧಾರವಾಡದಲ್ಲಿ ಬಹಳ ಮುಖ್ಯವಾದ ಸಭೆಯೊಂದು ಸೇರಿತು. ಅದೇ **ಅಖಿಲ ಕರ್ನಾಟಕ ಗ್ರಂಥಕರ್ತರ ಸಮ್ಮೇಳನದ** ಸಭೆ. ಕನ್ನಡ ಸಾಹಿತ್ಯ, ಗ್ರಂಥಗಳ ಪ್ರಕಟನೆಯ ಹಿನ್ನೆಲೆಯಲ್ಲಿ ಚರ್ಚಿಸುವ ಸಲುವಾಗಿ ಸೇರಿದ್ದ ಮೊಟ್ಟಮೊದಲ ಸಭೆ ಇದಾಗಿತ್ತು. ಇದರಲ್ಲಿ ಸಾಹಿತಿಗಳು, ಪ್ರಕಾಶಕರು ಇದ್ದರು. ಅಖಿಲ ಕರ್ನಾಟಕವನ್ನು ಪ್ರತಿನಿಧಿಸುವ ಸಲುವಾಗಿ ಇದರ ಎರಡನೆಯ ಸಭೆಯನ್ನು ಮೈಸೂರು ಸಂಸ್ಥಾನದ ಬೆಂಗಳೂರಿನಲ್ಲಿ ನಡೆಸಲು ಯೋಜಿಸಲಾಗಿತ್ತು. ಆದರೆ ಮೈಸೂರಿಗರು ಉತ್ತರ ಕರ್ನಾಟಕದ ಕನ್ನಡಿಗರ ಈ ಬಯಕೆಯನ್ನು 'ರಾಜಕೀಯವಾದ' ಸಭೆ ಸಮಾರಂಭಗಳು ಎಂಬ ನೆಪವೊಡ್ಡಿ ದೂರ ಸರಿದು ನಿಂತರು.[೯] ಇವರಿಗೆ ಈ ಸಭೆ ಸಾಂಸ್ಕೃತಿಕವಾದುದು ಅನ್ನಿಸಲಿಲ್ಲ. ಇದರಿಂದ ಬೇಸತ್ತ ವಿದ್ಯಾವರ್ಧಕ ಸಂಘದ ಸದಸ್ಯರು ಆಲೂರರ ನೇತೃತ್ವದಲ್ಲಿ ೩೦.೫.೧೯೦೮ ರಂದು ಎರಡನೆಯ ಸಭೆಯನ್ನು **ಧಾರವಾಡದಲ್ಲೇ** ನೆರವೇರಿಸಿದರು.

ತಾವು ಮಾತನಾಡುತ್ತಿದ್ದ ಭಾಷೆಗಳ ಮೂಲಕವೇ ದೇಶಾಭಿಮಾನವನ್ನು ಬೆಳೆಸಿಕೊಂಡು, ಅಭಿವ್ಯಕ್ತಿಸುತ್ತಿದ್ದ ಚಾರಿತ್ರಿಕ ಘಟ್ಟ ಅದು. ಇದಕ್ಕೆ ಕಾರಣ ಬಂಗಾಳದ ವಿಭಜನೆಯ ಘಟನೆ. ಹೀಗಾಗಿ ಭಾಷಾನ್ವಯ ಪ್ರಾಂತ್ಯಗಳ ರಚನೆಗೆ ಎಲ್ಲಿಲ್ಲದ ಜರೂರು ಕಾಣಿಸಿಕೊಳ್ಳ ತೊಡಗಿತು. ಇದೇ ವೇಳೆಗೆ ಸರಿಯಾಗಿ ಸರಕಾರವು ವಿಕೇಂದ್ರೀಕರಣದ ಬಗೆಗೆ ನಿಲುವು ತೆಗೆದುಕೊಳ್ಳುವ ಸನ್ನಾಹ ನಡೆಸಿತ್ತು. ಈ ಬಗ್ಗೆ ಸಾಕ್ಷಿ ಆಧಾರಗಳ ಸಂಗ್ರಹಣೆ ಮಾಡಲು ಒಂದು ಸಮಿತಿಯು ಅಸ್ತಿತ್ವಕ್ಕೆ ಬಂದಿತು. ಅದೇ 'Royal Commission on Decentralisation' ಎಂಬುದು. ಇದಕ್ಕೆ ಹೇಳಿಕೆಯನ್ನು ನೀಡುವಾಗ **ಬಾಲಗಂಗಾಧರ ತಿಲಕ್** ಅವರು -

> "ಭಾಷಾನ್ವಯ ಮತ್ತು ಏಕ ಜನಾಂಗದ ತಳಹದಿಯ ಮೇಲೆ ಪ್ರಾಂತಗಳ ಪುನರ್ವ್ಯವಸ್ಥೆಯನ್ನು ಮಾಡುವುದೂ, ಅವುಗಳೆಲ್ಲವನ್ನು ಕೇಂದ್ರದ ಅಧೀನದಲ್ಲಿಟ್ಟು, ಅವುಗಳ ಸಂಯುಕ್ತತೆಯನ್ನು ಸಾಧಿಸುವುದೂ ಅವಶ್ಯವಾಗಿದೆ."[೧೦]

- ಎನ್ನುವುದರ ಮೂಲಕ ಭಾಷಾನ್ವಯ ಪ್ರಾಂತ ರಚನೆಗೆ ಒತ್ತುಕೊಟ್ಟರು. ಈ ಹೇಳಿಕೆಯಿಂದ ಎರಡು ರೀತಿಯ ಪರಿಣಾಮಗಳು ಉಂಟಾದವು. ಒಂದು, ಬ್ರಿಟಿಷ್ ಆಳರಸರನ್ನು ಚಿಂತನೆಗೆ ಈಡು ಮಾಡಿದ್ದು, ಇನ್ನೊಂದು ಜನತೆಯನ್ನು ಮತ್ತಷ್ಟು ಹುರಿದುಂಬಿಸುವಂತೆ ಮಾಡಿದ್ದು. ಅಲ್ಲದೆ ಈ ಸನ್ನಿವೇಶದಲ್ಲಿ ಭಾಷಾ ಪತ್ರಿಕೆಗಳಿಗೆ ಎಲ್ಲಿಲ್ಲದ ಮಹತ್ವ ಬಂದಿತ್ತು. ಮಹಾರಾಷ್ಟ್ರದಲ್ಲಿಯಂತು ಭಾಷಾ ಪತ್ರಿಕೆಗಳ ಪ್ರಸರಣದಲ್ಲಿ ಏಕಾಏಕಿ ಹೆಚ್ಚಳ ಕಾಣಿಸಿಕೊಂಡಿತು.[೧] ಇದು 'ಸ್ವದೇಶಿ ಚಳವಳಿ'ಯು ರಾಷ್ಟ್ರೀಯ ಮಟ್ಟದಲ್ಲಿ ತೀವ್ರವಾಗಿ ಹರಡುತ್ತಿದ್ದ ಘಟ್ಟವೂ ಹೌದು. ಕೆಲವೆಡೆ ಕ್ರಾಂತಿಕಾರಕ ಚಟುವಟಿಕೆಗಳು ಆರಂಭಗೊಂಡಿದ್ದವು. ಅದರಲ್ಲಿ ಬಿಹಾರಿನ **ಮುಜಾಫರ್‌ಪುರದ** ಘಟನೆಯೂ ಒಂದು. ೧೯೦೮ ರಲ್ಲಿ ಇಬ್ಬರು ಬಂಗಾಳಿ ಕ್ರಾಂತಿಕಾರಿ ತರುಣರು ಎಸೆದ ಬಾಂಬಿನ ದಾಳಿಗೆ ಇಬ್ಬರು ಬ್ರಿಟಿಷ್ ಮಹಿಳೆಯರು ಸತ್ತರು.[೨] ಈ ಸಂಬಂಧವಾಗಿ ಬರೆದ ತಿಲಕರ ಲೇಖನಗಳು ಮತ್ತಷ್ಟು ಕೆರಳುವಂತೆ ಮಾಡಿದ್ದವು. ಬ್ರಿಟಿಷ್ ಆಳರಸರು ತಿಲಕರಿಗೆ ಆರು ವರುಷಗಳ ಶಿಕ್ಷೆಯನ್ನು ವಿಧಿಸಿದ್ದು ಈ ಕಾರಣಕ್ಕಾಗಿಯೇ. ಅಷ್ಟೇ ಅಲ್ಲದೆ ೧೯೦೯ ರ **ಮಾರ್ಲೆ- ಮಿಂಟೋ ಸುಧಾರಣೆಗಳ ಶಾಸನವು** ಜನತೆಯನ್ನು ತೃಪ್ತಿಗೊಳಿಸಲಿಲ್ಲ. ಇದರಿಂದ ಸ್ವಾತಂತ್ರ್ಯದ ಹೋರಾಟವು ಬಿರುಸಾಗಿ ಎಲ್ಲ ಕಡೆಗಳಿಂದಲೂ ಪ್ರತಿರೋಧ ಗಳನ್ನುಂಟು ಮಾಡಿತು. ಆಂಗ್ಲರು ತೆಗೆದುಕೊಳ್ಳುತ್ತಿದ್ದ ಯಾವುದೇ ಬಗೆಯ ನಿಲುವುಗಳು ಸಹ ಜನರನ್ನು ಕೆರಳಿಸುವಂತೆ ಮಾಡುತ್ತಿದ್ದವು. ಇಂಥ ಪ್ರತಿರೋಧ ಕೆರಳಿಕೆಗಳಿಗೆ ಬಂಗಾಳದ ವಿಭಜನೆಯ ಘಟನೆಯೇ ಮುಖ್ಯ ಕಾರಣವೆಂದು ತಿಳಿದು ವಸಾಹತುಶಾಹಿ ಆಡಳಿತವು ೧೯೧೧ ರಲ್ಲಿ ಅದನ್ನು ರದ್ದುಗೊಳಿಸುವ ತೀರ್ಮಾನಕ್ಕೆ ಬಂದಿತು. ಈ ಹಿನ್ನೆಲೆಯಲ್ಲಿ **ಲಾರ್ಡ್ ಹಾರ್ಡಿಂಜ್‌ನು** ತನ್ನ ರದ್ದುಗೊಳಿಸುವಿಕೆಯ ಆಜ್ಞೆಯಲ್ಲಿ -

> "ಈಗ ಬಂಗಾಲದ ಪ್ರಾಂತದಲ್ಲಿ ಸೇರ್ಪಡೆಯಾಗಿರುವ ಹಿಂದೀ ಭಾಷೆಯನ್ನಾಡುವ ಜನರಿಗೆ (ಬಿಹಾರಿಗಳಿಗೆ) ಪ್ರತ್ಯೇಕ ಆಡಳಿತವನ್ನು ನಿರ್ಮಿಸಿಕೊಡುವುದು ಅತ್ಯಂತ ಅವಶ್ಯಕವಾಗಿದೆ. ಈ ಜನರನ್ನು ಈವರೆಗೆ ಬಂಗಾಲಿಗಳೊಡನೆ ಅಸಮಂಜಸವಾಗಿ ಕೂಡಿಸಲಾಗಿತ್ತು. ಆದ್ದರಿಂದ ಇವರಿಗೆ ಈ ಮೊದಲು ಎಂದೂ ಸರಿಯಾಗಿ ಪ್ರಗತಿಯನ್ನು ಹೊಂದುವ ಯೋಗ್ಯ ಅವಕಾಶವು ದೊರೆಯಲಿಲ್ಲ"... ಮುಂದುವರೆದು

> "ಬಿಹಾರಿಗಳಿಗೆ ಬಿಹಾರವು ಬೇಕು ಎಂಬ ಘೋಷಣೆಯು ಮೇಲಿಂದ ಮೇಲೆ ಕೇಳ ಬರುತ್ತದೆ. ಇತ್ತೀಚಿನ ವರ್ಷಗಳಲ್ಲಿ ಬಿಹಾರದಲ್ಲಿ ಎದ್ದು ಕಾಣುವ ನವ ಜಾಗೃತಿಯುಂಟಾಗಿದೆ ಹಾಗೂ ಬಂಗಾಲದಿಂದ ಬೇರ್ಪಡೆಯಾಗುವವರೆಗೆ ಬಿಹಾರವು ಎಂದಿಗೂ ಏಳಿಗೆಯನ್ನು ಹೊಂದುವುದಿಲ್ಲವೆಂಬ ಭಾವನೆಯು ಬಿಹಾರಿಗಳಲ್ಲಿ ಬಲವಾಗಿ ಬೆಳೆಯಹತ್ತಿದೆ. ಯೋಗ್ಯ ಪರಿಹಾರವನ್ನು ಈಗಲೇ ಕಂಡುಹಿಡಿಯದಿದ್ದರೆ, ಸ್ವಲ್ಪ ಕಾಲಾನಂತರದಲ್ಲಿಯೇ ಈ ಭಾವನೆಯ ಪರಿಣಾಮವಾಗಿ ಚಳವಳಿಯು ಮೈದೋರುವುದು. ಆದ್ದರಿಂದ ನಾವಾಗಿಯೇ ಮುಂದೆ ಬಂದು, ಅತ್ಯಂತ ಸಮಂಜಸವಾದ ಹಾಗೂ ಅತ್ಯಂತ ಯೋಗ್ಯವಾದ ಈ ಬದಲಾವಣೆಯನ್ನು ಮಾಡಲು ಪ್ರಕೃತ ಸಮಯವು ಉತ್ತಮ ಸಂಧಿಯಾಗಿದೆ."[೧೩]

- ಎಂಬ ನಿಲುವನ್ನು ವ್ಯಕ್ತಪಡಿಸಿದನು. ಇದರ ಆಧಾರದ ಮೇಲೆ ೧೨.೧೨.೧೯೧೧ ರಂದು ಬ್ರಿಟಿಷ್ ಚಕ್ರಾಧಿಪತಿ ೫ ನೆಯ ಜಾರ್ಜ್ (ಭಾರತಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ)ನು ವಂಗಭಂಗ ಆಜ್ಞೆಯನ್ನು ರದ್ದುಗೊಳಿಸಿದ. ಅದರಂತೆ ಬಿಹಾರ-ಒರಿಸ್ಸಾ ಎಂಬ ಪ್ರಾಂತ್ಯವನ್ನು ರಚಿಸಿ ಬಂಗಾಳವನ್ನು ಹಾಗೂ ಅಸ್ಸಾಮನ್ನು ವಿಂಗಡಿಸಲಾಯಿತು. ಆದರೆ ಇದರಿಂದ ಒರಿಸ್ಸಾಕ್ಕೆ ಪ್ರತ್ಯೇಕ ಪ್ರಾಂತ್ಯವೇನು ದೊರೆತಂತೆ ಆಗಲಿಲ್ಲ. ಹೀಗಾಗಿ ಒರಿಯಾಗಳು ತಮ್ಮ ಚಳವಳಿಯನ್ನು ನಿರಂತರವಾಗಿ ಚಾಲ್ತಿಯಲ್ಲಿ ಇಟ್ಟುಕೊಂಡರು.[೧೪] ಭಾಷಾವಾರು ಚಳವಳಿಗಳಲ್ಲಿ ಮೊದಲು ಅಸ್ತಿತ್ವವನ್ನು ಪಡೆದ ಪ್ರಾಂತ್ಯವೇ ಬಂಗಾಳ. ಇದು ಇತರೆ ಭಾಷೆಗಳನ್ನಾಡುವವರಿಗೆ ಚಳವಳಿಯಲ್ಲಿ ತಲ್ಲೀನರಾಗುವಂತೆ ಮಾಡಿತು.

ಮರಾಠಿ, ಕನ್ನಡ, ತೆಲುಗು ಭಾಷಿಕರು ಭಾಷಿಕ ಚಳವಳಿಗಳ ಜೊತೆ ಜೊತೆಗೆ ಇನ್ನಿತರೆ ರಚನಾತ್ಮಕ ಚಟುವಟಿಕೆಗಳನ್ನು ಆರಂಭಿಸಿದ್ದರು. ಉದಾಹರಣೆಗೆ 'ವಂಗಭಂಗ'ದ ಪ್ರೇರಣೆಯಿಂದಾಗಿ ತೆಲುಗು ಭಾಷಿಕರು **ಆಂಧ್ರ ಮಹಾಸಭೆ** ಎಂಬ ಸಂಸ್ಥೆಯನ್ನು ಹುಟ್ಟುಹಾಕಿದ್ದು. ಇದು **ಆಲೂರ ವೆಂಕಟರಾವ್** ಮೊದಲಾದ ಧುರೀಣರಿಗೆ ಕಾರ್ಯ ಪ್ರವೃತ್ತರಾಗುವಂತೆ ಮಾಡಿತು. ಅಂದರೆ ಉದಾಹರಣೆಗೆ, ಎರಡು ಗ್ರಂಥಕರ್ತರ

ಸಮ್ಮೇಳನವನ್ನು ನಡೆಸಿದ್ದ ಉತ್ತರ ಕರ್ನಾಟಕದ ಕನ್ನಡಿಗರ ಮೂಲಕ ಮೂರನೆಯದನ್ನು ಮೈಸೂರು ಸಂಸ್ಥಾನದಲ್ಲಿಯೇ ನಡೆಸಲು ತೀರ್ಮಾನಿಸಿದ್ದು. ಕನ್ನಡಿಗರ ರಾಜಮನೆತನವಿದ್ದ ಮೈಸೂರಿನ ಬೆಂಗಳೂರು ನಗರದಲ್ಲಿಯೇ ಸಮ್ಮೇಳನ ನಡೆಸಿ ಪರಿಷತ್ತೊಂದನ್ನು ಸ್ಥಾಪಿಸಲು ಉತ್ತರದವರು ಬಯಸಿದರು. ಇವರು

> "ಕನ್ನಡ ನಾಡು ಒಂದು, ನಾವು ನಮ್ಮ ಭಾಷೆ, ಸಂಸ್ಕೃತಿಗಳನ್ನು ಒಂದಾಗಿ ಅಭಿವೃದ್ಧಿಗೊಳಿಸಬೇಕು."[೧೫]

- ಎಂಬ ಆಶಯವನ್ನು ಇಟ್ಟುಕೊಂಡು ಅಖಿಲ ಕರ್ನಾಟಕವನ್ನು ಪ್ರತಿನಿಧಿಸುವ ಸಂಸ್ಥೆಯೊಂದರ ಸ್ಥಾಪನೆಗೆ ಮೈಸೂರಿಗರ ಸಹಕಾರ ಬಯಸಿದರು. ಆದರೆ ಇದಕ್ಕೆ ಮೈಸೂರಿನ ಕನ್ನಡಿಗರು ಪ್ರತಿಕ್ರಿಯಿಸಿದ್ದು ಭಿನ್ನವಾಗಿ. ಅಂದರೆ ಇಂಥ ವಿಚಾರ ಮೈಸೂರಿಗರಿಗೆ ಒಂದು 'ರಾಜಕೀಯ ವಿಷಯ'ವಾಗಿ ಕಂಡಿತು. ಆದರೂ ಕರ್ಪೂರ ಶ್ರೀನಿವಾಸರಾವ್, ಎಂ. ವೆಂಕಟಕೃಷ್ಣಯ್ಯ ಮೊದಲಾದವರ ಸಹಕಾರ ಸಿಕ್ಕಿತು.

ಸಮಾನ ಆಸಕ್ತರು ಮಾಡಿದ ಪ್ರಯತ್ನಗಳು ಹಾಗೂ ಮೈಸೂರಿನ ಮಹಾರಾಜರು, ದಿವಾನ್ ವಿಶ್ವೇಶ್ವರಯ್ಯನವರು ನೀಡಿದ ಬೆಂಬಲದಿಂದಾಗಿ ಉತ್ತರದವರಿಗೆ ಹುರುಪು ಬಂದಿತು. ಈ ಹಿನ್ನೆಲೆಯಲ್ಲಿ ೧೯೧೪ ರ ಸಂಪದಭ್ಯುದಯ ಸಮಾಜ (Mysore Economic Conference)ದ ವಾರ್ಷಿಕ ಅಧಿವೇಶನದಲ್ಲಿ ಕನ್ನಡ ಭಾಷೆ, ಸಾಹಿತ್ಯ ಮತ್ತು ಗ್ರಂಥಕರ್ತರಿಗೆ ಸಂಬಂಧಿಸಿದಂತೆ-

> "ಕರ್ನಾಟಕ ಭಾಷೆಯಲ್ಲಿ ವಿವಿಧ ಗ್ರಂಥಗಳನ್ನು ರಚಿಸುವವರ ಪ್ರೋತ್ಸಾಹಕ್ಕಾಗಿ ಸ್ವಾತಂತ್ರ್ಯಾಧಿಕಾರವುಳ್ಳ ಪರಿಷತ್ತೊಂದು ಇರಬೇಕು ಮತ್ತು ಸರ್ಕಾರದವರು ಆ ಪರಿಷತ್ತೂ ಅಂಗೀಕರಿಸಿ ಅದಕ್ಕೆ ವಿಶೇಷ ಸಹಾಯ ಮಾಡುವುದು ಉಚಿತವೆಂದು ಸಂಪದಭ್ಯುದಯ ಸಮಾಜವು ಸರ್ಕಾರಕ್ಕೆ ಶಿಫಾರಸ್ಸು ಮಾಡಬೇಕು."[೧೬]

- ಎಂಬ ತೀರ್ಮಾನವನ್ನು ತೆಗೆದುಕೊಳ್ಳಲಾಗಿತ್ತು. ಅನಂತರ ಉಪ ಸಭೆಗಳು ನಡೆದು ೩.೫.೧೯೧೫ ರಂದು ಬೆಂಗಳೂರಿನ ಕೋಟೆ ಹೈಸ್ಕೂಲಿನಲ್ಲಿ ನಾಲ್ಕು ದಿನಗಳ ಸಾಹಿತ್ಯ ಸಮ್ಮೇಳನ ನಡೆಯಿತು. ಕನ್ನಡ ಮಾತನಾಡುವ ವಿವಿಧ ಭೂ ಪರಿಸರದ ಜನರು ಇಲ್ಲಿ ಬಂದು ಸೇರಿದ್ದರಿಂದ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗಳ ಅಭಿವೃದ್ಧಿಗಾಗಿ ೫.೫.೧೯೧೫

ರಂದು ಅಧಿಕೃತವಾಗಿ **ಕರ್ನಾಟಕ ಸಾಹಿತ್ಯ ಪರಿಷತ್ತು** ಎಂಬ ಸಂಸ್ಥೆಯನ್ನು ಹುಟ್ಟುಹಾಕಿದರು. ಮುಂದೆ ಈ ಸಂಸ್ಥೆಯು ತನ್ನ ನಿಯಮ, ನಿಬಂಧಗಳನ್ನು ರಚಿಸಿಕೊಂಡು ಪ್ರತಿ ವರ್ಷವೂ ವಿವಿಧ ಭೂ ಪ್ರದೇಶಗಳಲ್ಲಿ ಸಮ್ಮೇಳನಗಳನ್ನು ನಡೆಸಿ ಕನ್ನಡ-ಕರ್ನಾಟಕದ ಪರವಾಗಿ ನಿರ್ಣಯಗಳನ್ನು ತೆಗೆದುಕೊಳ್ಳುವುದರಲ್ಲಿ ಲೀನವಾಯಿತು.[೭]

ಇದೇ ಸಮಕಾಲೀನ ಸನ್ನಿವೇಶದಲ್ಲಿ (೧೯೧೪-೧೫ರಲ್ಲಿ) **ಆಂಧ್ರ ಮಹಾಸಭೆಯ** ನಿಲುವುಗಳು ಕನ್ನಡಿಗರನ್ನು ಎಚ್ಚರದಿಂದ ಇರುವಂತೆ ಮಾಡಿದವು. ಈ ಮಾತಿಗೆ 'ಮುಂಬಯಿ ಪ್ರಾಂತಿಕ ರಾಷ್ಟ್ರೀಯ ಪರಿಷತ್ತಿನ' ಕಾರ್ಯ ಚಟುವಟಿಕೆಗಳು ಹೊರತಲ್ಲ. ೧೯೧೫ ರಲ್ಲಿ **ತಿಲಕರ** ಪ್ರೇರಣೆಯಿಂದ ಸಭೆ ಸೇರಿದ ಮರಾಠಿಗರು ಬ್ಯಾರಿಸ್ಟರ್ **ಬ್ಯಾಪಿಸ್ಟಾ** ಅವರನ್ನು ಅಧ್ಯಕ್ಷತೆ ವಹಿಸಿಕೊಳ್ಳಲು ಕೇಳಿಕೊಂಡರು. ಅದರಂತೆ ನೆರವೇರಿದ ಸಭೆಯಲ್ಲಿ ಭಾಷೆಯ ಆಧಾರದ ಮೇಲೆಯೆ ಪ್ರಾಂತ್ಯಗಳ ನಿರ್ಮಾಣವು ಆಗಬೇಕು ಎಂದು ತೀರ್ಮಾನಿಸಲಾಯಿತು. ಇತರೆ ಭಾಷಿಕರ ಆಶಯಗಳಂತೆ **ಕರ್ನಾಟಕ ಸಾಹಿತ್ಯ ಪರಿಷತ್ತು** ಸಹ ತಲೆ ಎತ್ತಿತಾದರೂ ಇದು ರಾಜಕೀಯ ಮತ್ತು ಆಡಳಿತಾತ್ಮಕ ಸಮಸ್ಯೆಗಳನ್ನು ಪರಿಗಣಿಸುತ್ತಿರಲಿಲ್ಲ. ಆರಂಭದಲ್ಲಿ ಪರಿಷತ್ತು ತೆಗೆದುಕೊಂಡ ಇಂಥ ನಿಲುವುಗಳಿಂದ ಕನ್ನಡಿಗರ ಅನೇಕ ಸಮಸ್ಯೆಗಳು ನಗಣ್ಯವಾಗುತ್ತಿದ್ದವು. ಹೀಗಾಗಿ ಬೇರೆಯದೇ ಆದ ಒಂದು ವೇದಿಕೆಯ ಜರೂರು ಕಾಣಿಸಿ ಕೊಂಡಿತು. ಈ ಕಾರಣದಿಂದ ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದ ಸಂಸ್ಥೆಯೇ **ಕರ್ನಾಟಕ ಸಭೆ**.

'ಸದರ್ನ್ ಮರಾಠ ಜಿಲ್ಲೆ'ಗಳೆಂದೇ ಖ್ಯಾತಿ ಪಡೆದಿದ್ದ ಅಂದಿನ **ಮುಂಬಯಿ ಕರ್ನಾಟಕದ** ಕನ್ನಡ ಪ್ರದೇಶಗಳು ಬಹುಪಾಲು ಮಹಾರಾಷ್ಟ್ರದ ಪ್ರಭಾವದಿಂದಲೇ ಪ್ರೇರಿತವಾಗುತ್ತಿದ್ದವು. ಅಲ್ಲಿನ ರಾಜಕೀಯ ನಾಯಕರು ಹಾಗೂ ಅವರ ಚಿಂತನೆಗಳು ಈ ಭಾಗದ ಕನ್ನಡಿಗರ ಮೇಲೆ ಆಗದೆ ಇರಲಿಲ್ಲ. ಉದಾಹರಣೆಗೆ ಬಾಲಗಂಗಾಧರ ತಿಲಕರ ಪ್ರಭಾವ ಬೆಳಗಾವಿಯ **ಗಂಗಾಧರರಾವ್ ದೇಶಪಾಂಡೆ**, ಬಿಜಾಪುರದ **ಶ್ರೀನಿವಾಸರಾವ್ ಕೌಜಲಗಿ** ಮೊದಲಾದ ವರನ್ನು ಅಖಾಡಕ್ಕೆ ಇಳಿಸಿದವು. ಇವರು ರಾಷ್ಟ್ರೀಯ ಚಳವಳಿಯನ್ನು ಬಲಪಡಿಸುವಲ್ಲಿ ಇನ್ನಷ್ಟು ಮಂದಿ ಮುಖಂಡರನ್ನು ತಮ್ಮ ಕಡೆಗೆ ಸೆಳೆದುಕೊಂಡರು. ಅಂಥವರಲ್ಲಿ **ಮುದವೀಡು ಕೃಷ್ಣರಾವ್, ಮುದವೀಡು ವೆಂಕಟರಾವ್, ಆಲೂರ ವೆಂಕಟರಾವ್, ಜೋಶಿ ವೆಂಕಟರಾವ್, ಶೇಷಗಿರಿ ರಾಮಚಂದ್ರರಾವ್, ಕಡಪಾ ರಾಘವೇಂದ್ರರಾವ್, ಹೊನ್ನಾಪುರಮಠ ಗದಿಗೆಯ್ಯ, ಅಬ್ಬಿಗೇರಿ ಪಾಟೀಲ ಸಂಗನಗೌಡ,**

ನವಲಗುಂದ **ಕುಲಕರ್ಣಿ ಕರವೀರಪ್ಪ, ನರಗುಂದಕರ, ರಾಜಪುರೋಹಿತ** ಮೊದಲಾದವರು ಪ್ರಮುಖರು. ಇವರೆಲ್ಲ ತಿಲಕರ ಅನುಯಾಯಿಗಳು. ತಿಲಕರಂತೆ ಭಾಷಿಕ ಪ್ರಾಂತ್ಯಗಳ ಅಸ್ತಿತ್ವದ ಬಗೆಗೆ ಕನಸು ಕಾಣುತ್ತಿದ್ದವರು. ಅಖಂಡ ಕರ್ನಾಟಕದ ಬಗೆಗೆ ಚಿಂತನೆ ನಡೆಸುತ್ತಿದ್ದ ಇವರುಗಳು ೧೯೧೬ ರ ಒಂದು ದಿನ ಧಾರವಾಡದ 'ರೈಟರ್ ಓಣಿ'ಯಲ್ಲಿದ್ದ ಹೊನ್ನಾಪುರಮಠ ಅವರ ಮನೆಯ ಅಟ್ಟದ ಮೇಲೆ ಸಭೆ ಸೇರಿದರು. ಈ ಸಭೆಯಲ್ಲಿ ಕನ್ನಡಿಗರ ರಾಜಕೀಯ ಮತ್ತು ಆಡಳಿತಾತ್ಮಕ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು **ಕರ್ನಾಟಕ ಸಭಾ** (ಸಭಾ ಅಥವಾ ಸಭೆ)ವನ್ನು ಹುಟ್ಟು ಹಾಕಲಾಯಿತು.[೧೮] ಈ ಸಂಸ್ಥೆ ೧೯೧೭ ರಲ್ಲಿ 'ಕನ್ನಡಿಗರ ಕರ್ತವ್ಯ' ಎಂಬ ಕೃತಿಯನ್ನು ಪ್ರಕಟಿಸಿ ಏಕೀಕರಣದ ಚಳವಳಿಗೆ ಮತ್ತಷ್ಟು ಚಾಲನೆ ನೀಡಿತು.

'ಕರ್ನಾಟಕ ಸಭಾ'ದ ಸ್ಥಾಪನೆಯು 'ಕರ್ನಾಟಕತ್ವ'ದ ಅಥವಾ ಏಕೀಕರಣದ ಚಳವಳಿಯ ಸಾಂಸ್ಥಿಕ ರೂಪ ಪಡೆದ ಮೊಟ್ಟಮೊದಲ ರಾಜಕೀಯ ಸಂಸ್ಥೆ ಎಂದು ದಾಖಲಿಸಬಹುದು. ಈ ಸಂಸ್ಥೆಯ ಹುಟ್ಟಿಗೆ, ಕಾರ್ಯ ಚಟುವಟಿಕೆಗಳಿಗೆ ಕಡಪಾ ರಾಘವೇಂದ್ರರಾಯರೆ ಮೂಲ ಕಾರಣಕರ್ತರು. ಕರ್ನಾಟಕದ ಅಸ್ತಿತ್ವಕ್ಕಾಗಿ ಪ್ರತಿಯೊಬ್ಬ ಕನ್ನಡಿಗನಲ್ಲೂ ಏಕೀಕರಣದ ಬಗ್ಗೆ ಸ್ಪಷ್ಟಕಲ್ಪನೆ ಮೂಡುವಂತೆ ಮಾಡಿದರು. ಕನ್ನಡ ಪ್ರದೇಶಗಳ ಒಟ್ಟುಗೂಡುವಿಕೆಯ ಜರೂರನ್ನು ಅಭಿವ್ಯಕ್ತಿಸಲು ವಿವಿಧ ಭಾಗಗಳಲ್ಲಿ ಸಂಚರಿಸಿ ಒಂದು ಲಕ್ಷ ಜನರ ಸಹಿ ಸಂಗ್ರಹವನ್ನು ಮಾಡಿದರು. ಇಂಡಿಯಾಕ್ಕೆ ಬಂದಿದ್ದ **ಮಾಂಟೆಗ್ಯೂ ಚೆಲ್ಮ್ಸ್‌ಫರ್ಡ್ ಆಯೋಗಕ್ಕೆ** (೧೯೧೭ ರಲ್ಲಿ) ತಮ್ಮ ಮನವಿಯನ್ನೂ ಒಪ್ಪಿಸಲಾಯಿತು.

ಬ್ರಿಟಿಷ್ ಆಡಳಿತಶಾಹಿಗೆ ೧೯೧೪-೧೬ರ ವೇಳೆಯಲ್ಲಿ ಜಗತ್ತಿನಾದ್ಯಂತ ಪ್ರತಿರೋಧಗಳು ಕಾಣಿಸಿಕೊಂಡವು. ಇಂಡಿಯಾದಲ್ಲಿ ಆಂತರಿಕವಾಗಿ ಕ್ರಾಂತಿಕಾರ ಚಟುವಟಿಕೆಗಳನ್ನು ಅಡಗಿಸುವುದರ ಜೊತೆಗೆ ಮೊದಲನೆ ಜಾಗತಿಕ ಯುದ್ಧದಲ್ಲೂ ಪಾಲ್ಗೊಳ್ಳಬೇಕಾದ ಅನಿವಾರ್ಯತೆ ಬಂದೊದಗಿತು. ಅಲ್ಲದೆ ಇಂಡಿಯಾದ ಸೈನಿಕರು ಜರ್ಮನ್ನರಿಂದ ಶಸ್ತ್ರಾಸ್ತ್ರಗಳನ್ನು ಪಡೆದು ದಂಗೆ ಏಳುತ್ತಿದ್ದರು. ಟರ್ಕಿಯು ಆಂಗ್ಲರ ವಿರುದ್ಧ ಹೋರಾಡುತ್ತಿದ್ದುದರಿಂದ ಭಾರತೀಯ ಮುಸ್ಲಿಮರು, ಆಂಗ್ಲರಿಗೆ ಮುಖಾಮುಖಿಯಾಗಿ ನಿಲ್ಲುವಂತೆ ಮಾಡಿತ್ತು. ಇದರಿಂದ ಅವರ 'ಒಡೆದು ಆಳುವ' ನೀತಿಗೆ ಗಂಡಾಂತರ ಬಂದಿತು. ಅಷ್ಟೇ ಅಲ್ಲದೆ ಬ್ರಿಟನ್ನಿನ ಹಿಡಿತದಲ್ಲಿ ಇದ್ದ ಐರ್ಲೆಂಡ್

ಪ್ರದೇಶವು ಆಂಗ್ಲರ ವಿರುದ್ಧ ಸಾರಿದ್ದು **ಹೋಂ ರೂಲ್** ಆಂದೋಲನವನ್ನು. ಇಂಡಿಯಾದಲ್ಲಿದ್ದ ಐರ್ಲೆಂಡಿನ **ಅನಿಬೆಸೆಂಟ್** ದಂಪತಿಗಳು ಇಲ್ಲಿಯೂ ಹೋಂರೂಲ್ ಮಾದರಿಯ ಚಳವಳಿಯನ್ನು ಮಾಡಲು ಕರೆ ನೀಡಿದರು. ತಮ್ಮ ಆಡಳಿತವನ್ನು ತಾವೆ ನಿಭಾಯಿಸುವ ಹಕ್ಕನ್ನು ಪಡೆಯುವುದು ಈ ಹೋಂ ರೂಲ್ ಚಳವಳಿಯ ಮುಖ್ಯ ಆಶಯ ಆಗಿತ್ತು. ೧೯೧೬ ರಲ್ಲಿ ಎರಡು ಪ್ರಮುಖ ಕೇಂದ್ರಗಳಲ್ಲಿ ಈ ಚಳವಳಿಯ ಶಾಖೆಗಳು ಅಸ್ತಿತ್ವಕ್ಕೆ ಬಂದವು. ಅವುಗಳಲ್ಲಿ ಒಂದು ತಿಲಕರ ನೇತೃತ್ವದ **ಪೂನಾ** ಕೇಂದ್ರವಾದರೆ, ಇನ್ನೊಂದು ಅನಿಬೆಸೆಂಟ್ ನೇತೃತ್ವದ **ಮದ್ರಾಸ್** ಕೇಂದ್ರ. ತಿಲಕರ ನೇತೃತ್ವದಲ್ಲಿದ್ದ ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದ ಭಾಗಗಳು ಕನ್ನಡಿಗರನ್ನು ಎಚ್ಚರಿಸದೆ ಇರಲಿಲ್ಲ. ಅಂದು **ಮರಾಠಾ, ಕೇಸರಿ, ನ್ಯೂ ಇಂಡಿಯಾ, ಕಾಮನ್ ವ್ಹೀಲ್, ಯಂಗ್ ಇಂಡಿಯಾ** ಮೊದಲಾದ ಪತ್ರಿಕೆಗಳು ಹೋಂ ರೂಲ್ ಚಳವಳಿಯನ್ನು ವಿವರಿಸಿ ವಸಾಹತುಶಾಹಿಗೆ ಸವಾಲನ್ನು ಒಡ್ಡಿದ್ದವು. ಪ್ರತ್ಯೇಕ ಕರ್ನಾಟಕದ ಬಯಕೆಯನ್ನು ಹೊತ್ತಿದ್ದ ಕನ್ನಡಿಗರಿಗೆ ಈ ಚಳವಳಿಯ ಆಶಯ, ಕಾರ್ಯಕ್ರಮಗಳು ಹುರುಪನ್ನು ನೀಡದೆ ಇರಲಿಲ್ಲ. ಈ ಚಳವಳಿಗೆ ತಿಲಕರು **ಬೆಳಗಾಂ**ನ್ನು ಕೇಂದ್ರವನ್ನಾಗಿಸಿ ಒಂದು ಶಾಖೆಯನ್ನು ನೀಡಿದ್ದರು. ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳ ಕನ್ನಡಿಗರು ಇದು ತಮಗೆ ಸಿಕ್ಕ ತಕ್ಕ ಪುರಸ್ಕಾರ ಎಂದು ಅರಿತರು. ಇದರಿಂದ ಭಾಷಿಕ ಚಳವಳಿಗೆ ಸರಿಸಮವಾಗಿ ಹೋಂರೂಲ್ ಚಳವಳಿಯನ್ನು ಮುನ್ನಡೆಸುವ ಕಾಳಜಿ ಕಾಣಿಸಿಕೊಂಡಿತು.

ಉತ್ತರ ಕರ್ನಾಟಕದಲ್ಲಿನ ಹೋಂ ರೂಲ್ ಚಳವಳಿ ಮೈಸೂರಿಗರನ್ನೂ ಸೆಳೆದುಕೊಳ್ಳದೆ ಬಿಟ್ಟಿರಲಿಲ್ಲ. ಸಾಹಿತ್ಯ ಪರಿಷತ್ತು ಹಾಗೂ ಮಹಾರಾಜರ ಆಶ್ರಯದಲ್ಲಿನ ಇಲ್ಲಿನ ಕನ್ನಡ ಚಟುವಟಿಕೆಗಳು ಕೇವಲ ಮೈಸೂರು ಸಂಸ್ಥಾನಕ್ಕೆ ಮೀಸಲು ಆಗಿದ್ದ ಸಂದರ್ಭ ಆ ಹೊತ್ತಿನದು. ಅಂಥದುದರಲ್ಲಿ **ಮೈಸೂರು ವಿಶ್ವವಿದ್ಯಾಲಯದ** ಸ್ಥಾಪನೆ (೧೯೧೬)ಯೂ ಒಂದು. ಅಲ್ಲದೆ ಆರಂಭಿಕ ಮೂರು ಸಾಹಿತ್ಯ ಸಮ್ಮೇಳನಗಳನ್ನು **ಬೆಂಗಳೂರು** (೧೯೧೫, ೧೬) **ಮೈಸೂರು** (೧೯೧೭)ಗಳಲ್ಲೆ ನಡೆಸಿರುವುದು ಈ ಮಾತಿಗೆ ಒಳ್ಳೆಯ ಉದಾಹರಣೆ. ಮುಂಬಯಿ ಕರ್ನಾಟಕದವರ ಭಾಷಾಭಿಮಾನದ ತೀವ್ರತೆ ಮೈಸೂರಿಗರು **ಧಾರವಾಡ**ದಲ್ಲಿಯೆ ನಾಲ್ಕನೆಯ ಸಮ್ಮೇಳನ (೧೯೧೮) ವನ್ನು ನಡೆಸುವಂತೆ ಮಾಡಿತ್ತು. ಗಮನಿಸಬೇಕಾದ ಅಂಶವೆಂದರೆ ಸಮ್ಮೇಳನಾಧ್ಯಕ್ಷರಾಗಿದ್ದುದು ಮಾತ್ರ ಮೈಸೂರಿನವರೆ. ಮೈಸೂರಿನಭಿಮಾನ, ಮೈಸೂರುತನಗಳು ಬೇರೆ ಭಾಗದವರಿಗೆ ಅಸಮಾಧಾನವನ್ನುಂಟು

ಮಾಡದೆ ಇರಲಿಲ್ಲ. ಆದರೂ ಅಧ್ಯಕ್ಷರಾಗಿದ್ದ ಆರ್. ನರಸಿಂಹಾಚಾರ್ಯರ ನಾಡು, ನುಡಿ, ಸಂಸ್ಕೃತಿಗಳ ಬಗೆಗಿನ ಪರಿಚಯದ ಭಾಷಣ ಹಾಗೂ ಚೂರಾಗಿದ್ದ ಕನ್ನಡ ಪ್ರದೇಶಗಳ ಸ್ಥಿತಿಗತಿಗಳ ಅರಿವು ಜನರನ್ನು ಏಕೀಕರಣಕ್ಕಾಗಿ ಚಿಂತಿಸುವಂತೆ ಮಾಡಿದ್ದವು.[೧೯]

ಬೆಂಗಳೂರಿನ 'ಪರಿಷತ್ತ'ನ್ನು ಧಾರವಾಡದ 'ವಿದ್ಯಾವರ್ಧಕ ಸಂಘ'ಕ್ಕೆ ಹೋಲಿಕೆ ಮಾಡಿ ನೋಡಿದಲ್ಲಿ ಏಕೀಕರಣಕ್ಕೆ ಪರಿಷತ್ತು ಅಂಥ ಹುಮ್ಮಸ್ಸನ್ನೇನು ತೋರಿಸಿರಲಿಲ್ಲ (ಆರಂಭಿಕ ವರ್ಷಗಳಲ್ಲಿ). ಸಾಂಸ್ಕೃತಿಕ ವೇದಿಕೆ (ಪರಿಷತ್ತು)ಯ ಮೇಲೆ ಏಕೀಕರಣದ ಸಾಮಾಜಿಕ, ರಾಜಕೀಯ ವಿಚಾರಗಳನ್ನು ಚರ್ಚಿಸುವುದು ಸರಿ ಅಲ್ಲ ಎಂಬುದು ಮೈಸೂರುವಾದಿಗಳ ಧೋರಣೆ.[೨೦] ಅಂದರೆ ಹಳೆಯ ಮೈಸೂರಿನಲ್ಲಿಯೂ ರಾಜಕೀಯ ವಿಚಾರಗಳನ್ನು ಚರ್ಚಿಸುವ ಒಂದು ಪ್ರಾತಿನಿಧಿಕ ಸಂಸ್ಥೆಯೊಂದರ ಜರೂರು ಕಾಣಿಸಿಕೊಂಡಿತು. ಈ ಜರೂರು ಕಾಣಿಸಿಕೊಳ್ಳಲು ಸಮಕಾಲೀನ ಏಕೀಕರಣದ ತುರ್ತುಗಳೇ ಕಾರಣ. ಪರಿಷತ್ತು ಏಕೀಕರಣದ ಬಗೆಗೆ ಮಾತನಾಡದಿದ್ದ ಸಂದರ್ಭದಲ್ಲಿ (೧೯೧೭ ರಲ್ಲಿ) ವಿದ್ಯಾವರ್ಧಕ ಸಂಘ ಮೊದಲ ಬಾರಿಗೆ ಗೊತ್ತುವಳಿಯನ್ನು ಸ್ವೀಕರಿಸಿರುವುದು ದಾಖಲಾರ್ಹ. ಉದ್ಧರಿಸುವುದಾದರೆ ೭.೧೦.೧೯೧೭ ರಂದು ಸಂಘವು -

> "ಬ್ರಿಟಿಷ್ ಅಧಿಕಾರಕ್ಕೆ ಒಳಗಾದ ಎಲ್ಲ ಕನ್ನಡ ಊರು, ತಾಲ್ಲೂಕು, ಜಿಲ್ಲೆಗಳನ್ನು ಒಟ್ಟುಗೂಡಿಸಿ ಒಂದು ರಾಜಕೀಯ ವಿಭಾಗವನ್ನು ಮಾಡಿ ಅದಕ್ಕೆ ಕರ್ನಾಟಕ ಪ್ರಾಂತವೆಂದು ಕರೆಯುವ ಬಗ್ಗೆ ಸರಕಾರಕ್ಕೆ ಬಿನ್ನಹ ಮಾಡಬೇಕು. ಉದಾಹರಣಾರ್ಥ ಸೊಲ್ಲಾಪುರ ಜಿಲ್ಲೆಯ ಕೆಲವು ಭಾಗ ಕನ್ನಡವಿರುತ್ತದೆ. ಮದ್ರಾಸ್ ಇಲಾಖೆಯಲ್ಲಿ ಬಳ್ಳಾರಿ, ದಕ್ಷಿಣ ಕನ್ನಡ ಈ ಜಿಲ್ಲೆಗಳು ಕೂಡ ಕನ್ನಡವಿದ್ದು ಕಡಪಾ, ಕರ್ನೂಲ, ಅನಂತಪೂರ ಮುಂತಾದ ಜಿಲ್ಲೆಗಳ ಎಷ್ಟೋ ಹಳ್ಳಿಗಳಲ್ಲಿ ತಾಲ್ಲೂಕುಗಳೂ ಕನ್ನಡ ಇರುತ್ತವೆ. ಇವುಗಳನ್ನೆಲ್ಲ ಒಟ್ಟುಗೂಡಿಸಿ ಒಂದು ಕರ್ನಾಟಕ ಇಲಾಖೆ ಅಥವಾ ಪ್ರಾಂತವೆಂಬ ರಾಜಕೀಯ ವಿಭಾಗವನ್ನು ಮಾಡಿದರೆ ಕನ್ನಡಿಗರ ಐಕ್ಯಕ್ಕೂ, ಹಿತಕ್ಕೂ, ಬೆಳವಣಿಗೆಗೂ ಅನುಕೂಲವಾಗುವುದು."[೨೧]

- ಎಂಬ ಗೊತ್ತುವಳಿಯನ್ನು ಸ್ವೀಕರಿಸಿದೆ. 'ಸಂಘ' ಹಾಗೂ 'ಪರಿಷತ್ತು' ಇವೆರಡು ನಾಡು, ನುಡಿ, ಸಾಹಿತ್ಯ, ಸಾಂಸ್ಕೃತಿಕ ವಿಚಾರಗಳಿಗೆ ಮೀಸಲಾದ ಸಂಸ್ಥೆಗಳೇ ಆದರೂ ಏಕೀಕರಣದ ವಿಚಾರವಲ್ಲಿ ಭಿನ್ನತೆಗಳಿವೆ. ಈ ವಿಚಾರವಾಗಿ 'ಸಂಘ'ವು ಬಿಚ್ಚು

ಮನಸ್ಸಿನಿಂದ, ಉತ್ಸಾಹದಿಂದ ಮಾತನಾಡಿದಷ್ಟು 'ಪರಿಷತ್ತು' ಆರಂಭದಲ್ಲಿ ಮಾತನಾಡಲಿಲ್ಲ. ಇದಕ್ಕೆ ಮುಖ್ಯ ಕಾರಣ ಉತ್ತರ ಕರ್ನಾಟಕದ ಕನ್ನಡಿಗರಿಗೆ ಇದ್ದ ಏಕೀಕರಣದ ತುರ್ತು ಮೈಸೂರಿಗೆ ಇಲ್ಲದಿದ್ದುದು.

ಮೈಸೂರು ಸಂಸ್ಥಾನದಲ್ಲಿ ೧೯೧೭ ರ ಸನ್ನಿವೇಶ ಚಾರಿತ್ರಿಕವಾಗಿ ಬಹಳ ಮುಖ್ಯವಾದುದು. ಏಕೆಂದರೆ ಇಲ್ಲಿನ ರಾಜಕೀಯ, ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕೆ ವೇದಿಕೆಯೊಂದನ್ನು ಕಟ್ಟಿಕೊಂಡ ಘಟ್ಟವಿದು. ಅಲ್ಲದೆ ಜಾತಿ, ಕೋಮುಗಳ ಆಧಾರದ ಮೇಲೆ ಸಂಘಟಿತ ರೂಪವನ್ನು ಪಡೆದುಕೊಂಡದ್ದು ಇಲ್ಲಿಂದಲೇ. ಇಂಡಿಯಾದ ಉಪಖಂಡದಲ್ಲಿ ಮೊಟ್ಟಮೊದಲ ಪ್ರಜೆಗಳ ಪ್ರಾತಿನಿಧಿಕ ಸಭೆ ೧೮೮೧ ರಿಂದಲೇ ಮೈಸೂರಿನಲ್ಲಿ ಚಾಲ್ತಿಯಲ್ಲಿ ಇತ್ತು (ಎಷ್ಟು ಪ್ರಾತಿನಿಧಿಕ ಎಂಬುದು ಇಲ್ಲಿ ಅಪ್ರಸ್ತುತ). ಆದರೆ ಜನಸಾಮಾನ್ಯರ ಆಗುಹೋಗುಗಳಿಗೆ ಇದು ಪ್ರಾತಿನಿಧಿಕವಾಗಿ ಸ್ಪಂದಿಸುತ್ತಿರಲಿಲ್ಲ ಎಂಬುದು ಸ್ಪಷ್ಟ. ಏಕೆಂದರೆ ಇದರ ಸದಸ್ಯರೆಲ್ಲರೂ ಮೇಲ್ವರ್ಗದ ಜಮೀನುದಾರರು ಹಾಗೂ ವರ್ತಕರೇ ಆಗಿದ್ದುದರಿಂದ. ಆದ್ದರಿಂದಲೇ ಇದು **The Assembly of the representative Raiyats and merchants from all the taluks of the Mysore** ಎಂಬ ಹೆಸರನ್ನು ಹೊಂದಿತ್ತು. ಈ ವರ್ಗಗಳ ಅಧಿಕಾರದ ತೆಕ್ಕೆಯಲ್ಲಿ ಅಂದಿನ ಮೈಸೂರಿನ ಜನತೆಯ ನಿರ್ಧಾರಗಳು ಅಡಗಿದ್ದವು. ಅಷ್ಟೇ ಅಲ್ಲದೆ ಇಲ್ಲಿನ ಬ್ರಾಹ್ಮಣೇತರ ಹಿಂದುಳಿದ ವರ್ಗಗಳು ಮುಂದುವರೆದ ಬ್ರಾಹ್ಮಣರಿಂದ ಸಾಕಷ್ಟು ವಂಚಿತರಾಗಿದ್ದರು. ಉದಾಹರಣೆಗೆ ಆಡಳಿತಶಾಹಿಯಲ್ಲಿ ಗ್ರಾಮಲೆಕ್ಕಿಗ (ಶಾನುಭೋಗ)ನಿಂದ ಹಿಡಿದು ಉನ್ನತ ದರ್ಜೆಯ ದಿವಾನಗಿರಿ ಪದವಿಯವರೆವಿಗೂ ಬ್ರಾಹ್ಮಣರ ಪ್ರಾಬಲ್ಯವೆ ಇತ್ತು. ಅಂದರೆ ಶೇಕಡ ಎಪ್ಪತ್ತಕ್ಕೂ ಹೆಚ್ಚಿನ ಪಾಲು ಎಲ್ಲ ಉನ್ನತ ಹುದ್ದೆಗಳು ಬ್ರಾಹ್ಮಣರಿಗೆ ಮೀಸಲಾಗಿದ್ದವು.[೨೨] ಈ ವಾಸ್ತವತೆಯನ್ನು, ಶೋಷಣೆಯನ್ನು ಬ್ರಾಹ್ಮಣೇತರರ ಅರಿವಿಗೆ ತಂದು ಜಾಗೃತಿ ಮೂಡಿಸುವಲ್ಲಿ **ಸಿ.ಆರ್. ರೆಡ್ಡಿ, ಎಂ. ಬಸವಯ್ಯ** ಮೊದಲಾದವರ ಕೊಡುಗೆ ಗಮನಾರ್ಹ. ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಬ್ರಾಹ್ಮಣೇತರರ ರಾಜಕೀಯ ವೇದಿಕೆಯೆ **ಪ್ರಜಾಮಿತ್ರ ಮಂಡಳಿ**. ದಿನಾಂಕ ೧೬.೧೨.೧೯೧೭ ರಂದು ಅಸ್ತಿತ್ವಕ್ಕೆ ಬಂದ ಈ ಮಂಡಳಿಗೆ ಆಧಾರ ರೂಪ ಮದ್ರಾಸಿನ 'ಜಸ್ಟೀಸ್ ಪಾರ್ಟಿ'.[೨೩] ಇದರ ಮೊದಲ ಕಾರ್ಯದರ್ಶಿಗಳಾಗಿದ್ದ ಸರ್. **ಪಿ. ತ್ಯಾಗರಾಜ ಚೆಟ್ಟಿ** ಅವರು ಬ್ರಾಹ್ಮಣರ ವಿರುದ್ಧ 'ಜಸ್ಟೀಸ್' ಚಳವಳಿಯನ್ನೇ ಸಾರಿದ್ದರು. ಇವರ 'ಎಲ್ಲರಿಗೂ ಸಾಮಾಜಿಕ ನ್ಯಾಯ ಹಾಗೂ ಸಮಾನಾವಕಾಶ ಎಂಬ ಚಿಂತನೆ ಮೈಸೂರಿನ ಹಿಂದುಳಿದ ವರ್ಗಗಳನ್ನು ಪ್ರಭಾವಿತರನ್ನಾಗಿಸಿತ್ತು. ಇಲ್ಲಿ ಬಹಳ

ಮುಖ್ಯವಾದ ಸಂಗತಿಯೆಂದರೆ ಮೈಸೂರಿನಲ್ಲಿ ಹೇಗೆ ಬ್ರಾಹ್ಮಣೇತರರ ಚಿಂತನೆಗಳು ಬೇರು ಬಿಡುತ್ತಿದ್ದವೋ ಹಾಗೆಯೇ ಮುಂಬಯಿ ಕರ್ನಾಟಕದಲ್ಲಿಯೂ ಕಾಣಿಸಿಕೊಳ್ಳುತ್ತಿದ್ದುದು. ಈ ಬಗ್ಗೆ ಚಾರಿತ್ರಿಕ ಸುಳಿವುಗಳು ದೊರೆಯುವುದು ಮಹಾರಾಷ್ಟ್ರದ ಜ್ಯೋತಿಭಾ ಫುಲೆಯವರ 'ಶೂದ್ರಾತಿ ಶೂದ್ರ' ವರ್ಗಗಳನ್ನು ಕುರಿತ ಚಿಂತನೆಗಳಿಂದ. ಇದರಿಂದ ಎಚ್ಚೆತ್ತ ಇಲ್ಲಿನ ಬ್ರಾಹ್ಮಣೇತರ ವರ್ಗವು ಸರಿಯಾದ ರಾಜಕೀಯ ವೇದಿಕೆಯೊಂದರ ಅಸ್ತಿತ್ವಕ್ಕೆ ಹುಡುಕಾಟವನ್ನು ನಡೆಸಿತ್ತು. ಅಂದರೆ ಮುಂಬಯಿ ಕರ್ನಾಟಕದ ಕನ್ನಡಿಗರು ಹಾಗೂ ಹಳೆಯ ಮೈಸೂರಿನ ಕನ್ನಡಿಗರು ಏಕೀಕರಣದ ವಿಚಾರಗಳಲ್ಲಿ ಭಿನ್ನತೆಗಳನ್ನೂ, ಬ್ರಾಹ್ಮಣೇತರರ ಚಿಂತನೆಗಳಲ್ಲಿ ಸಹಮತ ವನ್ನೂ ತೋರಿಸುತ್ತಿದ್ದುದು ಸ್ಪಷ್ಟ ಆಗುತ್ತದೆ. ಈ ಮಾತನ್ನು ಹಿಂದುಳಿದ ವರ್ಗಗಳನ್ನು ಗಮನದಲ್ಲಿ ಇಟ್ಟುಕೊಂಡು ಹೇಳಲಾಗಿದೆ.

ಬ್ರಾಹ್ಮಣೇತರ ವರ್ಗಗಳಿಗೂ ಏಕೀಕರಣ ಚಿಂತನೆಗೂ ಕೆಲವು ಅಂತರ ಸಂಬಂಧಗಳು ಇವೆ. ಅಂದರೆ ಏಕೀಕರಣಕ್ಕೆ ಬ್ರಾಹ್ಮಣರು ತೋರಿದ ಪ್ರತಿಕ್ರಿಯೆ, ಹುಮ್ಮಸ್ಸನ್ನು ಬ್ರಾಹ್ಮಣೇತರರು ಆರಂಭದಲ್ಲಿ ತೋರಲಿಲ್ಲ. ಇದಕ್ಕೆ ಮುಖ್ಯ ಕಾರಣ ಬ್ರಾಹ್ಮಣೇತರರು ಮೊದಲು ತಮ್ಮನ್ನು ತಾವು ಗುರುತಿಸಿಕೊಂಡು ಅಭಿವೃದ್ಧಿಯನ್ನು ಹೊಂದಲು ಆಲೋಚಿಸಿದ್ದು. ಅಂದರೆ ಆ ಮೂಲಕ ಬ್ರಾಹ್ಮಣರಿಗೆ ಸರಿಸಮಾನರಾಗಿ ನಿಲ್ಲುವ ಸಂಘರ್ಷದಲ್ಲಿ ತೊಡಗಿದರು. ಇದಕ್ಕಾಗಿ ಅಂದು ಶೈಕ್ಷಣಿಕ ಸವಲತ್ತು, ಆರ್ಥಿಕ ರಿಯಾಯಿತಿಗಳನ್ನು ದಕ್ಕಿಸಿಕೊಳ್ಳುವ ಅನಿವಾರ್ಯತೆ ಇತ್ತು. ಅಲ್ಲದೆ ಆ ಮೂಲಕ ಸರಕಾರದ ವಿವಿಧ ನೇಮಕಾತಿಗಳಲ್ಲಿ ಮೀಸಲಾತಿ ಪಡೆಯುವ ಪ್ರಮುಖ ಆಶಯ ಅವರದು. ಈ ಹಿನ್ನೆಲೆಯಲ್ಲಿ ಮೈಸೂರಿನಲ್ಲಿ ಒಕ್ಕಲಿಗ, ಲಿಂಗಾಯಿತ, ಮಹಮದೀಯರ ಜಾತಿ-ಕೋಮುವಾರು ಸಂಘಟನೆಗಳು ಹುಟ್ಟಿಕೊಂಡು ತಮ್ಮವರ ಹಿತರಕ್ಷಣೆಗಾಗಿ ಸಹಕಾರ-ಸಂಘರ್ಷಗಳನ್ನು ನಡೆಸಿದ್ದವು. ಈ ಎಲ್ಲ ಕಾರಣಗಳಿಂದ ಬ್ರಾಹ್ಮಣೇತರ ಹಿಂದುಳಿದ ವರ್ಗಗಳಿಗೆ ಆರಂಭದಲ್ಲಿ ಪ್ರಾಂತೀಯತೆ, ರಾಷ್ಟ್ರೀಯತೆಗಳ ಜಂಜಾಟಗಳು ಅಷ್ಟು ಪ್ರಸ್ತುತವೆನ್ನಿಸದೆ ಹೋಗಿರಬಹುದು. ಅದು ಸಹಜವಾದ ಸ್ಥಿತಿಯೂ, ನಿಲುವೂ ಹೌದು. ಬಹುಶಃ ಈ ವಿಚಾರಗಳ ಹಿನ್ನೆಲೆಯಲ್ಲಿಯೇ ಆಲೂರ ವೆಂಕಟರಾಯರು -

> "ಶ್ರೀ ಹಳಕಟ್ಟಿ, ಶ್ರೀ ಜಂಗಿನ ಮುರಿಗೆಯ್ಯನವರೇ ಮುಂತಾದ ಬ್ರಾಹ್ಮಣೇತರರಷ್ಟೇ ನಮಗೆ ಅನುಕೂಲ. ಸಾಮಾನ್ಯತಃ ಇಲ್ಲಿಯ (ಉತ್ತರ ಕರ್ನಾಟಕದ) ಬ್ರಾಹ್ಮಣೇತರರು ನಮಗೆ ಅನುಕೂಲ ವಾಗಿದ್ದಿಲ್ಲ. ಏಕೆಂದರೆ ಆಗ ಸರಕಾರದವರ ಮರ್ಜಿ ಹಿಡಿಯುವುದ ರಲ್ಲಿಯೇ ಅವರಿಗೆ

> ಲಾಭವಿತ್ತು. ಆದರೂ ನಾವು ಧೈರ್ಯದಿಂದ ಅಂಥ ರಾಷ್ಟ್ರೀಯ ಪರಿಷತ್ತನ್ನು ೧೯೨೦ ರಲ್ಲಿ ಕೂಡಿಸಿದೆವು. ಆ ಪರಿಷತ್ತಿನಲ್ಲಿ ಕೆಲ ಬ್ರಾಹ್ಮಣೇತರರು ಏಕೀಕರಣದ ಗೊತ್ತುವಳಿಗೆ ವಿರುದ್ಧವಾಗಿ ಗೊತ್ತುವಳಿ ಯನ್ನು ತಂದಿದ್ದರು. ಆದರೆ ಪ್ರಚಂಡ ಬಹುಮತದಿಂದ ಕರ್ನಾಟಕ ಏಕೀಕರಣಕ್ಕೆ ಮುಖ್ಯ ಚಳವಳಿಯು ಮಂಜೂರಾಯಿತು. ಮುಂದೆ ಅನೇಕ ವರ್ಷ ಬ್ರಾಹ್ಮಣೇತರರು ಏಕೀಕರಣಕ್ಕೆ ವಿರುದ್ಧವಾಗಿಯೇ ಇದ್ದರು. ಆದರೆ ಮುಂದೆ ರಾಜಕೀಯ ಸ್ಥಿತಿಯು ಬದಲಾಗುತ್ತ ಹೋಗಿ, ಸ್ವರಾಜ್ಯವು ಹೆಚ್ಚು ಹೆಚ್ಚು ಸಮೀಪಕ್ಕೆ ಬಂದಂತೆ, ಪ್ರಜಾರಾಜ್ಯದಲ್ಲಿ ಕರ್ನಾಟಕತ್ವಕ್ಕೆ ಪುಷ್ಟೀ ಕೊಡುವುದ ರಲ್ಲಿಯೇ ತಮಗೆ ಲಾಭವಿದೆಯೆಂಬುದನ್ನು ಅವರು ಮನಗಂಡಿದ್ದರಿಂದ ಅವರ ವಿರೋಧವು ತಾನಾಗಿಯೇ ಕರಗಿ ಹೋಯಿತು.''[೨೪]

- ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆಲೂರರ ಈ ಮಾತುಗಳು ಎಷ್ಟರಮಟ್ಟಿಗೆ ವಸ್ತುನಿಷ್ಠವಾಗಿವೆ ಎಂಬ ಪ್ರಶ್ನೆಯೂ ಕಾಡುತ್ತದೆ. ಆದರೆ ಅದು ಬೇರೆಯದೇ ಆದ ಚರ್ಚೆ. ಇಲ್ಲಿ ಬ್ರಾಹ್ಮಣೇತರರು ಆರಂಭದಲ್ಲಿ ಪ್ರಾಂತ್ಯಾಭಿಮಾನ, ರಾಷ್ಟ್ರಾಭಿಮಾನಗಳಿಗೆ ಬ್ರಾಹ್ಮಣರಷ್ಟು ಸ್ಪಂದಿಸಲಿಲ್ಲ ಎನ್ನುವುದಕ್ಕೆ ಹಲವು ಕಾರಣಗಳು ಇವೆ. ಉದಾಹರಣೆಗೆ ಅಂದಿನ ಮಡಿವಂತಿಕೆಯ ಸಮಾಜ ಬ್ರಾಹ್ಮಣೇತರರನ್ನು ಮುಕ್ತವಾಗಿ ಒಳಗು ಮಾಡಿ ಕೊಂಡಿರಲಿಲ್ಲ. ಶೈಕ್ಷಣಿಕ ಹಾಗೂ ಸಾಮಾಜಿಕ ಅಸಮಾನತೆಗಳು ಇವರಿಗೆ ಕೀಳರಿಮೆಯನ್ನುಂಟು ಮಾಡಿದವು. ಅಂದಿನ ರಾಜಕೀಯ ಹಾಗೂ ಆರ್ಥಿಕ ಸನ್ನಿವೇಶಗಳಲ್ಲಿ ತಮ್ಮನ್ನು ಎಲ್ಲಿ ಗುರುತಿಸಿಕೊಳ್ಳಬೇಕು ಎಂಬುದರ ಬಗ್ಗೆ ಸ್ಪಷ್ಟತೆ ಇರಲಿಲ್ಲ. ಆದರೆ ಬ್ರಾಹ್ಮಣೇತರರು ಇಂಡಿಯಾದ ಇತರೆಡೆಗಳಂತೆಯೇ ಇಲ್ಲಿಯೂ ತಮ್ಮ ಜಾತಿ, ಸ್ಥಾನಮಾನಗಳನ್ನು ಗುರುತಿಸಿಕೊಳ್ಳುವುದರ ಮುಖೇನ ನಾಡು, ನುಡಿ, ರಾಷ್ಟ್ರೀಯತ್ವ, ಕರ್ನಾಟಕತ್ವದ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯ ಆಯಿತು ಎಂಬುದಂತೂ ಸ್ಪಷ್ಟ. ಇವರು ಆ ಮೂಲಕವೇ ಕರ್ನಾಟಕದ ಏಕೀಕರಣ, ಇಂಡಿಯಾದ ಸ್ವಾತಂತ್ರ್ಯ ಚಳವಳಿಗಳ ಮುಖ್ಯ ಧಾರೆಗೆ ಕ್ರಮೇಣ ಸೇರಿಕೊಂಡದ್ದು.

೧೯೧೮ ರಲ್ಲಿ ಬಿ.ಎನ್. ಶರ್ಮಾ ಅವರು ದೆಹಲಿಯ ಕೇಂದ್ರ ಶಾಸನ ಸಭೆಯಲ್ಲಿ 'ಇಂಡಿಯಾವನ್ನು ಭಾಷಾನ್ವಯವಾಗಿಸಬೇಕು' ಎಂದು ಸೂಚನೆ ಕೊಟ್ಟರು. ಲಿಯೋನಲ್

ಕರ್ಜಿಸನು ಸಹ ಈ ತತ್ವವನ್ನು ಒಪ್ಪಿ ಮುಂದಿನ ಕ್ರಮಕ್ಕಾಗಿ ಪ್ರಯತ್ನಿಸಿದ.[೨೦] ೧೯೨೦ ರ ವೇಳೆಗೆ ಕನ್ನಡ ಪ್ರದೇಶಗಳಲ್ಲಿ ಒಂದು ರೀತಿಯ ಸಂಕೀರ್ಣ ಸನ್ನಿವೇಶ ನಿರ್ಮಾಣ ಆಗಿತ್ತು. ಇದಕ್ಕೆ ಅಂದು ಚಾಲ್ತಿಯಲ್ಲಿದ್ದ ಅನೇಕ ಜಾತಿ, ಕೋಮು, ಶೈಕ್ಷಣಿಕ, ಆರ್ಥಿಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಂಘಟನೆಗಳ ಚಟುವಟಿಕೆಗಳೂ ಕಾರಣ. ಹೀಗಾಗಿ ಒಮ್ಮೆ ಒಂದು ಬಗೆಯ ಇನ್ನೊಮ್ಮೆ ಭಿನ್ನ ರೀತಿಯ ರಾಜಕೀಯ-ಸಾಮಾಜಿಕ . ಅವಸ್ಥಾಂತರಗಳಿಗೆ ತಮ್ಮನ್ನು ತಾವು ಒಡ್ಡಿಕೊಂಡಿದ್ದ ಕನ್ನಡಿಗರು ಭಿನ್ನಭಿನ್ನವಾಗಿಯೆ ಪ್ರತಿಕ್ರಿಯಿಸುತ್ತಿದ್ದುದು ಸಹಜವೆ. ೧೯೨೦ ರಲ್ಲಿ ಧಾರವಾಡದ ರೊದ್ದ ಶ್ರೀನಿವಾಸರಾಯರು ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು ೬ನೆಯ ಸಮ್ಮೇಳನ ೧೯೨೦, ಹೊಸಪೇಟೆ ಇದರಿಂದ ಆ ಭಾಗದವರಿಗೆ ಮೊದಲ ಬಾರಿಗೆ ಪ್ರಾಶಸ್ತ್ಯ ದೊರೆತಂತೆ ಆಯಿತು. ಶ್ರೀನಿವಾಸರಾಯರು ತಮ್ಮ ಭಾಷಣದಲ್ಲಿ ಮೈಸೂರು, ಮುಂಬಯಿ ಕರ್ನಾಟಕದ ಭಾಷಾ ಸ್ಥಿತಿಗತಿಗಳನ್ನು, ಏರುಪೇರುಗಳನ್ನು ಮನವರಿಕೆ ಮಾಡಿಕೊಟ್ಟರು. ಅಲ್ಲದೆ ಬಳ್ಳಾರಿಯ ಕನ್ನಡದ ಸ್ಥಿತಿಯ ಬಗ್ಗೆ ಪ್ರಸ್ತಾಪಿಸಿ ತೆಲುಗಿನ ಪ್ರಭಾವ, ಒತ್ತಡಗಳ ಬಗ್ಗೆ ಎಚ್ಚರಿಸಿದ್ದು ಭಾಷಾಭಿಮಾನವನ್ನು ಹೆಚ್ಚು ಮಾಡಿತು. ಈ ಮಧ್ಯೆ 'ಕರ್ನಾಟಕ ಸಭೆ'ಯು 'ಭಾರತ ರಾಷ್ಟ್ರೀಯ ಕಾಂಗ್ರೆಸಿ'ನೊಂದಿಗೆ ನಿಕಟ ಸಂಪರ್ಕವನ್ನು ಬೆಳೆಸಿತ್ತು. ಅಂದರೆ ಆ ಮೂಲಕ ಕಾಂಗ್ರೆಸ್ ಅಧಿವೇಶನಗಳಲ್ಲಿ ಭಾಗವಹಿಸಿ ಭಾಷಾನುಗುಣ ಪ್ರಾಂತ್ಯಗಳ ನಿರ್ಮಾಣದ ಜರೂರನ್ನು ಅರಿವಿಗೆ ತರುವುದು ಸಾಧ್ಯ ಎಂಬುದು ಇವರ ನಿಲುವು. ಅಷ್ಟೇ ಅಲ್ಲದೆ ಕಾಂಗ್ರೆಸಿನ ಕಾರ್ಯ ಚಟುವಟಿಕೆಗಳಿಗೂ ಪ್ರಾಂತೀಯ ಭಾಷೆಗಳಾಧಾರದ ಶಾಖೆಗಳು ಅವಶ್ಯಕ ಎಂಬುದನ್ನು ಸ್ಪಷ್ಟಪಡಿಸುವುದು ಇವರ ಮುಖ್ಯ ಆಶಯ.

ಕನ್ನಡಿಗರಿಗೆ ಸಂಬಂಧಿಸಿದ ರಾಜಕಾರಣದ ವಿಚಾರ, ಸಮಸ್ಯೆಗಳ ಮಂಡನೆಗೆ ವೇದಿಕೆಯೊಂದರ ಅಸ್ತಿತ್ವಕ್ಕಾಗಿ ಪ್ರಯತ್ನಗಳು ನಡೆಯುತ್ತಲೇ ಇದ್ದವು. ಆಲೂರ ವೆಂಕಟರಾವ್, ಕಡಪಾ ರಾಘವೇಂದ್ರರಾವ್, ಬ್ಯಾಹಟ್ಟಿ ಸುಬ್ಬರಾವ್ ಮೊದಲಾದವರು ನಾಗಪುರ ಕಾಂಗ್ರೆಸ್ ಅಧಿವೇಶನಕ್ಕೆ ಮೊದಲು ಧಾರವಾಡದಲ್ಲಿ ಸಭೆ ಸೇರಿದ್ದರು. ಕನ್ನಡ-ಕರ್ನಾಟಕಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳನ್ನು ಚರ್ಚಿಸಿ ತೀರ್ಮಾನಕ್ಕೆ ಬರುವುದು ಈ ಸಭೆಯ ಉದ್ದೇಶ ಆಗಿತ್ತು. ಈ ಹಿನ್ನೆಲೆಯಲ್ಲಿ ಅಸ್ತಿತ್ವಕ್ಕೆ ಬಂದುದು ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತು (೧೯೨೦) ಎಂಬುದು. ಸುಮಾರು ೨೦೦೦ ಪ್ರತಿನಿಧಿಗಳಿದ್ದ ಈ ಸಮ್ಮೇಳನಕ್ಕೆ ಮೈಸೂರಿನ ಮಾಜಿ ದಿವಾನರಾದ ವಿ.ಪಿ. ಮಾಧವ ರಾಯರೆ ಅಧ್ಯಕ್ಷರು.

ಮೈಸೂರಿನ ಕಡೆಯವರನ್ನು ಹೀಗೆ ಆಯ್ಕೆ ಮಾಡಿಕೊಳ್ಳುವುದರ ಮೂಲಕ ಉತ್ತರ ಕರ್ನಾಟಕದೊಂದಿಗಿನ ಸಂಬಂಧ ಇನ್ನಷ್ಟು ಗಟ್ಟಿಗೊಳ್ಳುವುದು ಎಂಬ ನಂಬಿಕೆ ಅವರದು. ಏಕೀಕರಣದ ವಿಚಾರದಲ್ಲಿ ಹೆಚ್ಚಿನ ಒಲವು ತೋರಿದ್ದ ವಿ.ಪಿ. ಮಾಧವರಾಯರು ಮುಂಬಯಿ-ಕರ್ನಾಟಕದವರನ್ನು ಉದ್ದೇಶಿಸಿ -

> "ಬೇರೆ ಬೇರೆ ಭಾಗಗಳಲ್ಲಿ, ಎಷ್ಟೋ ಚಿಕ್ಕವಾದರೂ ಸಭೆಗಳನ್ನು ಕರೆದು ನನ್ನನ್ನು ಅಧ್ಯಕ್ಷರನ್ನಾಗಿ ಮಾಡಿರಿ. ನಾನು ಬಂದು ಅಖಂಡ ಕರ್ನಾಟಕ ನಿರ್ಮಾಣದ ಗೊತ್ತುವಳಿಯನ್ನು ಅವರಿಂದ ಮಾಡಿಸಿಕೊಡುತ್ತೇನೆ."[೨೬]

- ಎಂಬ ಭರವಸೆಯೊಂದಿಗೆ ಹುರಿದುಂಬಿಸಿದ್ದರು. ಇದಕ್ಕೆ ಸಾಕ್ಷಿಯಾಗಿ ಬಳ್ಳಾರಿ ಜಿಲ್ಲೆಯ ಸಭೆಯೊಂದರ ಏಕೀಕರಣದ ಗೊತ್ತುವಳಿಯನ್ನು ಮಂಜೂರು ಮಾಡಿಸಿದ್ದೂ ಉಂಟು. ಆದರೆ ಮಾಧವರಾಯರಿಗಾಗಲಿ ಅಥವಾ ಉತ್ತರ ಕರ್ನಾಟಕದ ಏಕೀಕರಣವಾದಿಗಳಿಗಾಗಲಿ ಹಳೆಯ ಮೈಸೂರಿನಲ್ಲಿ ಈ ಗೊತ್ತುವಳಿಗಳನ್ನು ಮಾಡಿಸುವುದು ಸುಲಭದ ಮಾತು ಎನ್ನಿಸಿರಲಿಲ್ಲ. ಮೈಸೂರಿನವರು ಕೀರ್ತನ ಪ್ರೇಮಿಗಳಾಗಿದ್ದುದರಿಂದ ಅಲ್ಲಲ್ಲಿ ಸಮಾವೇಶಗಳನ್ನು ಏರ್ಪಡಿಸುತ್ತಿದ್ದರು. ಇಂಥ ಸಮಾವೇಶಗಳನ್ನು ಕೀರ್ತನೆಯ ನೆಪದಲ್ಲಿ ಕರೆದು ಏಕೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಲು ಸಾಧ್ಯ ಎಂಬ ಕಿವಿ ಮಾತು ಮಾಧವರಾಯರದು. ಅದರಂತೆ ಧಾರವಾಡದ ಗೆಳೆಯರು (ಆಲೂರರು, ಕೊಪ್ಪಳದ ಜಯರಾಮಾಚಾರ್ಯ ಮೊದಲಾದವರು) ಒಂದು ವಾರದ ಕೀರ್ತನೆಗಳ ಕಾರ್ಯಕ್ರಮವನ್ನು ಬೆಂಗಳೂರಿನಲ್ಲಿ ಏರ್ಪಡಿಸಿದ್ದೂ ಉಂಟು. ಇದಕ್ಕೆ ಮಾಧವರಾಯರೆ ಅಧ್ಯಕ್ಷರು. ಕೀರ್ತನಕಾರರಿಗೆ ಕೀರ್ತನೆಗಳ ನಡುವೆ ಏಕೀಕರಣದ ಮಹತ್ವವನ್ನು ಬಣ್ಣಿಸಿ ಪ್ರಚಾರ ಮಾಡಲು ಸಲಹೆ ನೀಡಲಾಗಿತ್ತು. ಈ ಪ್ರಯೋಗದಿಂದ ಬಹುಪಾಲು ಮೈಸೂರುವಾದಿಗಳು ಏಕೀಕರಣದ ಬಗ್ಗೆ ಚಿಂತನೆ ಮಾಡಲಾರಂಭಿಸಿದರು.

'ಕರ್ನಾಟಕ ರಾಜಕೀಯ ಪರಿಷತ್ತು' ಭಾಷೆಯನ್ವಯ ಕರ್ನಾಟಕಕ್ಕೆ ಪ್ರತ್ಯೇಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯನ್ನು ರಚಿಸಲು ರಾಷ್ಟ್ರೀಯ ನಾಯಕರ ಮೇಲೆ ಒತ್ತಡ ತರಲಾರಂಭಿಸಿತ್ತು. ಪರಿಣಾಮವಾಗಿ ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ (ಡಿಸೆಂಬರ್ ೧೯೨೦) ೮೦೦ ಪ್ರತಿನಿಧಿಗಳು ಭಾಗವಹಿಸಿ ಪ್ರತ್ಯೇಕ ಕೆ.ಪಿ.ಸಿ.ಸಿ.ಗಾಗಿ ತಮ್ಮ ನಿಶ್ಚಿತ ನಿಲುವನ್ನು ಅಭಿವ್ಯಕ್ತಿಸಿದರು. ಈ ಹಿನ್ನೆಲೆಯಲ್ಲಿ ಗಾಂಧಿಯವರು ೨೧ ಪ್ರಾಂತೀಯ ಕಾಂಗ್ರೆಸ್ ಕಮಿಟಿಗಳನ್ನು ರಚಿಸುವಂತಾಯಿತು. ಅವುಗಳಲ್ಲಿ ಕರ್ನಾಟಕಕ್ಕೂ ಒಂದು ಕಮಿಟಿ

ದೊರೆಯಿತು. ಇದರಿಂದ ಸಾಧ್ಯ ಆಗಿದ್ದು ತಮ್ಮ ತಮ್ಮ ಭಾಷೆಗಳಲ್ಲಿಯೇ ಪ್ರಚಾರ ಕಾರ್ಯಗಳನ್ನು ಮಾಡುವುದು. ಏಕೀಕರಣದ ನೆಲೆಯಲ್ಲಿ ಈ ರೀತಿಯ ಪಲ್ಲಟ ಬಹಳ ಮಹತ್ವದ್ದು. ಇದರಿಂದ ೧೯೨೦ ರ ಎಸ್.ಸಿ. ಕೇಳ್ಕರ್‌ರ ನಿರ್ಣಯದಂತೆ ಬಳ್ಳಾರಿ ಗಡಿಸೀಮೆಯ ಪ್ರಶ್ನೆ (ಕನ್ನಡ ಅಥವಾ ತೆಲುಗು ಪ್ರದೇಶವೊ ಎಂಬುದು) ತಾತ್ಕಾಲಿಕವಾಗಿ ಬಗೆಹರಿದಂತೆ ಆಯಿತು. ಅಲ್ಲದೆ ಇದೇ ಸಂದರ್ಭದಲ್ಲಿ ಕರ್ನಾಟಕದಿಂದ ಕೇಂದ್ರಕ್ಕೆ ಆರಿಸಿಹೋಗಿದ್ದ ಎ.ಬಿ. ಲಠ್ಠೆ ಅವರು ಭಾಷಾವಾರು ಪ್ರಾಂತಗಳ ನಿರ್ಮಾಣಕ್ಕೆ ಸಮಿತಿ ರಚಿಸಲು ಒತ್ತಡ ತಂದರು. ರಾಷ್ಟ್ರೀಯ ಹೋರಾಟಕ್ಕೆ ಹೆಚ್ಚಿನ ಕಾವು ಬರುತ್ತಿದ್ದುದು ಪ್ರಾಂತೀಯ ಕಾಂಗ್ರೆಸ್ ಕಮಿಟಿಗಳಿಂದ. 'ಅಸಹಕಾರದ ಆಂದೋಲನ' ಇಂಡಿಯಾದಾದ್ಯಂತ ಪ್ರಕರವಾಗುತ್ತಿತ್ತು. ಈ ಮಧ್ಯೆ ೧೯೨೧ ರ ನಾಗಪುರದ 'ಧ್ವಜ ಸತ್ಯಾಗ್ರಹ'ಕ್ಕೆ ಕನ್ನಡಿಗರ ಮುಂದಾಳತ್ವ ವಹಿಸಿದ್ದ ಎಸ್.ಎಸ್. ಹರ್ಡೀಕರ್ ಮೊದಲಾದವರು ಬಂಧನಕ್ಕೆ ಒಳಗಾದರು. ಧಾರವಾಡದಲ್ಲಿ ಪಿಕೆಟಿಂಗ್, ಚಳವಳಿ, ಧ್ವಜವಂದನೆ ಇತ್ಯಾದಿಗಳು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಜೋಶಿ ವಿನಾಯಕರಿಂದ ಆರಂಭಗೊಂಡವು. ಇದರಿಂದ ಉದ್ರಿಕ್ತಗೊಂಡ ಆಡಳಿತಶಾಹಿ ಗೋಲಿಬಾರ್ ಮಾಡಿಸುವುದರ ಮೂಲಕ ಮೂವರನ್ನು ಬಲಿ ತೆಗೆದು ಕೊಂಡಿತು.[೬] ಹೀಗಾಗಿ ಜನರು ಮತ್ತಷ್ಟು ಉದ್ರಿಕ್ತರಾದರು. ವಿರೋಧ ವ್ಯಕ್ತಪಡಿಸಿದ ಮುದವೇಡ ವೆಂಕಟರಾಯರಂಥವರು ಸೆರಮನೆ ಸೇರಬೇಕಾಯಿತು. ಇಂಥ ಹೇಯಕೃತ್ಯ ಗಳನ್ನು ಪತ್ರಿಕೆಗಳು ಖಂಡಿಸದೆ ಇರಲಿಲ್ಲ. ಇದರಿಂದ ಅನೇಕ ಪತ್ರಿಕೆಗಳ ಮೇಲೆ ದಿಗ್ಬಂಧನ ಹೇರಿ ಸಂಪಾದಕರುಗಳನ್ನು ಸೆರೆಹಿಡಿಯಲಾಯಿತು. 'ಕರ್ಮವೀರ'ದ ರಂ.ರಾ ದಿವಾಕರ, ಹುಕ್ಕೇರಿ ರಾಮರಾವ್ ಮೊದಲಾದವರು ಸೆರೆಯಾದಾಗ ಆಲೂರ ವೆಂಕಟರಾಯರೆ ಅನೇಕ ಪತ್ರಿಕೆಗಳನ್ನು ಹೊರಡಿಸಿದರು. ಉದಾಹರಣೆಗೆ ಕರ್ನಾಟಕ ವೃತ್ತ, ರಾಜಹಂಸ, ವಿಜಯ, ಕರ್ಮವೀರ ಇತ್ಯಾದಿ. ಅಸಹಕಾರ ಚಳವಳಿ ಪ್ರಬಲವಾಗಿದ್ದ ಸಂದರ್ಭದಲ್ಲಿ ಈ ಪತ್ರಿಕೆಗಳು ಹೆಚ್ಚಿನ ಜವಾಬ್ದಾರಿಯನ್ನು ಹೊತ್ತಿದ್ದವು. ಇವು ರಾಷ್ಟ್ರಾಭಿಮಾನ, ಕನ್ನಡಾಭಿಮಾನ ಗಳನ್ನು ಒಟ್ಟೊಟ್ಟಿಗೆ ಮೂಡಿಸುವ ಆಶಯವನ್ನು ಹೊಂದಿದ್ದವು. ಅವುಗಳಲ್ಲಿ ಅಂದಿನ ಸ್ವದೇಶಾಭಿಮಾನಿ, ತಿಲಕ ಸಂದೇಶ (ಮಂಗಳೂರು), ಕಾನಡ ವೃತ್ತ (ಕುಮಟ), ಕರ್ನಾಟಕ, ವಿಶ್ವ ಕರ್ನಾಟಕ (ಬೆಂಗಳೂರು), ರಾಜಹಂಸ, ಕರ್ಮವೀರ, ವಿಜಯ, ಶುಭೋದಯ, ಕರ್ನಾಟಕ ವೃತ್ತ, ಧನಂಜಯ, ಜಯ ಕರ್ನಾಟಕ, ಜಯಂತಿ (ಧಾರವಾಡ), ಕೊಡಗು (ಮಡಿಕೇರಿ), ಸತ್ಯಾಗ್ರಹಿ (ಉಡುಪಿ), ಕನ್ನಡ, ಸಹಜೀವನ, ಕನ್ನಡಿಗ (ಬಾಗಲಕೋಟೆ) ಮೊದಲಾದವು ಜನರ ಜಾಗೃತಿಗೆ ಕಾರಣವಾಗಿವೆ.

'ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ'ಯು ಕನ್ನಡ ಮಾತನಾಡುವ ಎಲ್ಲ ಪ್ರದೇಶಗಳನ್ನು ಇಡಿಯಾಗಿ ಪ್ರತಿನಿಧಿಸುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿತ್ತು. ಆದರೆ ಅದು ಸಫಲವಾಗಲಿಲ್ಲ. ಇದಕ್ಕೆ ಮುಂಬಯಿ ಕನ್ನಡಿಗರ ಹಾಗೂ ಕಾಂಗ್ರೆಸ್ಸಿಗರ ನಡುವೆ ಇದ್ದ ಅನ್ಯೋನ್ಯವಲ್ಲದ ಸಂಬಂಧಗಳೇ ಕಾರಣ. ಮುಂಬಯಿ ಅಥವಾ ಉತ್ತರ ಕರ್ನಾಟಕದವರ ಏಕೀಕರಣದ ತುಡಿತ ಮೈಸೂರಿಗರ ಮೇಲೆ ಅಂಥ ತೀವ್ರ ಪ್ರಭಾವ ಬೀರುತ್ತಿರಲಿಲ್ಲ. ಇದಕ್ಕೆ ಎರಡೂ ಕಡೆಯವರಲ್ಲಿದ್ದ ಗುಮಾನಿ, ಶಂಕೆ, ಸ್ವಾಭಿಮಾನಗಳೇ ಕಾರಣ. ಮೈಸೂರಿಗರಿಗೆ ತಮ್ಮ 'ಮೈಸೂರುತನ'ದ ಮೇಲೆ ಇದ್ದ ಅಭಿಮಾನ ಅಪಾರವಾದುದು. ಅವರು -

> "ಹಿಂದುಳಿದ ಮುಂಬೈ ಕನ್ನಡ ಪ್ರಾಂತ್ಯಕ್ಕಿಂತಲೂ, ಮೈಸೂರು ಕನ್ನಡ ಮಾತನಾಡುವ ಮಾದರಿ ಪ್ರಾಂತ್ಯವೆಂದೂ, ಕನ್ನಡ ಸಾಂಸ್ಕೃತಿಕ ಪ್ರಸ್ತಭೂಮಿ ತುಂಗಭದ್ರಾ ನದಿಯ ದಕ್ಷಿಣ (ಮೈಸೂರು ಸಂಸ್ಥಾನ)ದಲ್ಲಿದೆ."[೨೮]

- ಎಂಬ ನಿಲುವನ್ನು ತಳೆದಿದ್ದರು. ಈ ನಿಲುವುಗಳಿಂದ ಏಕೀಕರಣದ ಆಶಯ-ನಿರ್ಣಯಗಳಿಗೆ ೧೯೨೩ ರಲ್ಲಿ 'ಮುಂಬಯಿ ಶಾಸನಸಭೆ'ಯಲ್ಲಿ **ಸರ್ ಸಿದ್ದಪ್ಪ ಕಂಬಳಿ** ಅವರ ಏಕೀಕರಣದ ಸಮರ್ಥನೆಗಳಿಂದ ಹೆಚ್ಚು ಅನುಕೂಲಗಳು ಆಗಲಿಲ್ಲ. ಮುಂದೆ **ಯು. ರಾಮರಾಯರ** ಏಕೀಕರಣದ ನಿಲುವುಗಳಿಗೂ ಇಂಥದೇ ಪರಿಣಾಮ ಆಯಿತು.

ಅಖಿಲ ಭಾರತ ಕಾಂಗ್ರೆಸ್ಸಿನ ೩೯ ನೆಯ ಅಧಿವೇಶನವು ೧೯೨೪ ರಲ್ಲಿ ನಡೆಯಿತು. ಪಕ್ಷದ ಹಿರಿಯ ಧುರೀಣರು ಅದನ್ನು **ಬೆಳಗಾಂ**ನಲ್ಲಿಯೆ ನಡೆಸಲು ತೀರ್ಮಾನಿಸಿದ್ದರು. ಈ ಅವಕಾಶವನ್ನು ಕನ್ನಡಿಗರು ಬಳಸಿಕೊಳ್ಳದೆ ಇರಲಿಲ್ಲ. ಅಂದರೆ ಕನ್ನಡಿಗರ ಏಕೀಕರಣದ ಪರಿಕಲ್ಪನೆಯ ದೃಢತೆ, ಉತ್ಸಾಹಗಳನ್ನು ಅಭಿವ್ಯಕ್ತಿಸುವುದು ಮುಖ್ಯವಾಗಿತ್ತು. **ಶಂಕರರಾವ್ ಜೋಶಿ, ಮಂಗಳವೇಡೆ ಶ್ರೀನಿವಾಸರಾವ್** ಮೊದಲಾದವರ ಸಹಕಾರಗಳಿಂದ **ಕಡಪಾ ರಾಘವೇಂದ್ರರಾಯರು** ಬೆಳಗಾವಿ ಅಧಿವೇಶನವನ್ನು ಸೂಕ್ತವಾಗಿ ಬಳಸಿಕೊಂಡರು. ಅಂದರೆ ಇಲ್ಲಿ ಅಖಿಲ **ಕರ್ನಾಟಕ ಏಕೀಕರಣ ಪರಿಷತ್ತು**ನ್ನು ನೆರವೇರಿಸಿದರು. ಅಷ್ಟೇ ಅಲ್ಲದೆ **೨೫.೧೨.೧೯೨೪** ರಂದು **ಕರ್ನಾಟಕ** ಏಕೀಕರಣ **ಸಂಘ**ವು ಮೊದಲ ಬಾರಿಗೆ ಅಸ್ತಿತ್ವಕ್ಕೆ ಬಂದಿತು. ಏಕೀಕರಣದ ಚಳವಳಿಯನ್ನು ಆಶಯವನ್ನಾಗಿ ಹೊತ್ತ ಸಂಘ-ಸಂಸ್ಥೆಗಳಲ್ಲಿ ಇದು ಬಹಳ ಮಹತ್ವದ್ದು. ಅಧಿವೇಶನಕ್ಕೆ ಬಂದಿದ್ದ ಕಾಂಗ್ರೆಸಿನ ರಾಷ್ಟ್ರೀಯ

ನಾಯಕರಿಗೆ ಬೆಳಗಾವಿಯಲ್ಲಿನ ಸಿದ್ಧತೆಗಳು ಕನ್ನಡಿಗರ ಸಾಂಸ್ಕೃತಿಕ ಅನನ್ಯತೆ-ಅಸ್ಮಿತೆಗಳನ್ನು ಗುರುತಿಸು ವಂತೆ ಮಾಡಿದ್ದವು.[೨೯] ಅಲ್ಲದೆ **ವೀಣೆ ಶೇಷಣ್ಣ** ಅವರ ಸಂಗೀತ ಕಚೇರಿಯು 'ಕರ್ನಾಟಕ ಸಂಗೀತ'ಕ್ಕೆ ತನ್ನದೇ ಆದ ಮಹತ್ವವನ್ನು ತಂದುಕೊಟ್ಟಿತ್ತು. ಇವೆಲ್ಲದರ ಮಧ್ಯೆ ಮೊದಲ ಏಕೀಕರಣ ಸಮ್ಮೇಳನವು ನಡೆದು **ಸರ್ ಸಿದ್ಧಪ್ಪ ಕಂಬಳಿ** ಅವರು ಅಧ್ಯಕ್ಷತೆ ವಹಿಸಿದರು. **ಹುಯಿಲಗೋಳ ನಾರಾಯಣರಾಯರು** ತಮ್ಮ ಪ್ರಸಿದ್ಧ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು..." ಎಂಬ ನಾಡಗೀತೆಯನ್ನು ಮೊಟ್ಟಮೊದಲ ಬಾರಿಗೆ ಹಾಡಿ ಹುರಿದುಂಬಿಸಿದರು. ಅಲ್ಲದೆ ಕನ್ನಡಿಗರನ್ನು ಎಚ್ಚರಿಸಲು 'ಕನ್ನಡಿಗನ ಸರ್ವಸ್ವ' (ಸಂಯುಕ್ತ ಕರ್ನಾಟಕ ಪ್ರಾಂತ) ಎಂಬ ಕೃತಿಯನ್ನು ಇಲ್ಲಿ ಬಿಡುಗಡೆ ಮಾಡಲಾಯಿತು.

ಆಂಧ್ರದವರು ೧೯೨೫ ರಲ್ಲಿ ತೆಗೆದುಕೊಂಡ ಕೆಲವು ನಿರ್ಣಯಗಳಿಂದ ಕನ್ನಡಿಗರು ಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸಬೇಕಾಯಿತು. ಅಂದರೆ ಬಳ್ಳಾರಿ ಜಿಲ್ಲೆಯನ್ನು ಆಂಧ್ರದ ವಿಶ್ವವಿದ್ಯಾಲಯಕ್ಕೆ ಸೇರಿಸಿಕೊಳ್ಳುವ ಯತ್ನಗಳು ನಡೆದವು. ಕನ್ನಡಿಗರ ತೀವ್ರವಾದ ಪ್ರತಿಭಟನೆಗಳ ನಡುವೆ ತಮ್ಮ ನಿರ್ಧಾರವನ್ನು ಹಿಂತೆಗೆದುಕೊಳ್ಳಬೇಕಾಯಿತು. ಇನ್ನು ಅನೇಕ ಪ್ರತಿಕ್ರಿಯೆಗಳಿಂದ ಕರ್ನಾಟಕ ಕಾಂಗ್ರೆಸ್ ಕಮಿಟಿಯು ತನ್ನ ಪ್ರಣಾಳಿಕೆಯಲ್ಲಿ ಏಕೀಕರಣದ ಸಮಸ್ಯೆಯನ್ನು ಮುಖ್ಯವನ್ನಾಗಿಸಿಕೊಂಡಿತು. ಪ್ರಣಾಳಿಕೆಯಲ್ಲಿ ಏಕೀಕರಣದ ಆಶ್ವಾಸನೆಯನ್ನು ಸೇರಿಸಲು ಹಾಸನದ **ಯುವಕ ಸಂಘದ** ಸದಸ್ಯರ ಅದರಲ್ಲೂ **ಕೆ.ಎಂ. ರುದ್ರಪ್ಪ, ಹಾರ್ನಹಳ್ಳಿ ರಾಮಸ್ವಾಮಿ** ಮೊದಲಾದವರ ಪ್ರಯತ್ನಗಳು ದಾಖಲಾರ್ಹವಾದವು. ಇದರ ಮುಂದಿನ ಪರಿಣಾಮವೇ ಕಾಂಗ್ರೆಸ್ಸಿನ 'ಸೇವಾದಳ'ದ **ನಾ.ಸು. ಹರ್ಡೀಕರರು** ೧೯೨೬. ರಲ್ಲಿ ೩೬,೦೦೦ ಸಹಿ ಸಂಗ್ರಹವನ್ನು ಮಾಡಿ ಏಕೀಕರಣದ ಬಗ್ಗೆ ಒತ್ತಡ ತಂದದ್ದು. ಈ ಮಧ್ಯೆ (೧೯೨೫ ರಲ್ಲಿಯೆ) **ಕರ್ನಾಟಕ ವಿದ್ಯಾವರ್ಧಕ ಸಂಘದವರು** ಬ್ರಿಟಿಷ್ ಕನ್ನಡ ಪ್ರದೇಶಗಳ ಐಕ್ಯತೆಯ ಬಗ್ಗೆ ಎರಡನೆಯ ನಿರ್ಣಯವನ್ನು ಅಂಗೀಕರಿಸಿದರು.[೩೦] ಅಷ್ಟೇ ಅಲ್ಲದೆ ತಮ್ಮದೇ ಆದ ಒಂದು **ಕರ್ನಾಟಕ** ವಿಶ್ವವಿದ್ಯಾಲಯದ ಸ್ಥಾಪನೆ ಆಗಬೇಕೆಂಬ ಗೊತ್ತುವಳಿಯನ್ನು ಸ್ವೀಕರಿಸಲಾಗಿತ್ತು. ಹೀಗಾಗಿ ಕಾಂಗ್ರೆಸ್ ಏಕೀಕರಣದ ವಿಚಾರದಲ್ಲಿ ಇನ್ನಷ್ಟು ತೊಡಗಿಸಿಕೊಂಡಿತು. ಅದು ಏಕೀಕರಣದ ವಿಚಾರದಲ್ಲಿ ತನ್ನದೇ ಆದ ರೀತಿಯಲ್ಲಿ ಕಾರ್ಯಮಗ್ನವಾಗಿದೆ ಎಂಬುದನ್ನು ಸ್ಪಷ್ಟಪಡಿಸುವಂತೆ ಮಾಡಿತ್ತು. ಅಂದರೆ ಕಾಂಗ್ರೆಸ್ ಏಕೀಕರಣಕ್ಕಾಗಿ ಪ್ರಶ್ನೆ ಮಾಲಿಕೆ ಸಿದ್ಧಪಡಿಸುವುದು,

ಇತರರ ಅರಿವಿಗಾಗಿ ಇಂಗ್ಲೀಷಿನಲ್ಲಿ ಗ್ರಂಥ ಪ್ರಕಟಿಸುವುದು, ಅಖಿಲ ಕರ್ನಾಟಕವನ್ನೊಳಗೊಂಡಂತೆ ೩೪ ಮುಂದಾಳುಗಳ ನೇಮಕ, ನೆಹರು ಮತ್ತು ಸರ್ವಪಕ್ಷೀಯ ಸಭೆಗಳಲ್ಲಿ ಏಕೀಕರಣದ ಪ್ರಶ್ನೆ ಇಟ್ಟು ಮನ್ನಣೆ ಪಡೆಯುವ, ಮನವಿಗಳನ್ನು ಸಲ್ಲಿಸುವ, ಸಭೆ ಸಮಾರಂಭಗಳಲ್ಲಿ ಒತ್ತಡ ತರುವ ಮೊದಲಾದ ಕಾರ್ಯಕ್ರಮಗಳಿಂದ ತಾನು ಎಲ್ಲರಿಗಿಂತ ಹೆಚ್ಚು ಕಾಳಜಿ ವಹಿಸುವ ನಿಲುವನ್ನು ತಳೆಯಿತು. ಆದರೆ ಇವೆಲ್ಲವೂ **ಬ್ರಿಟಿಷ್ ಕನ್ನಡ** ಪ್ರದೇಶಗಳನ್ನು (ಮದರಾಸು, ಮುಂಬಯಿ, ಕೊಡಗು) ಮಾತ್ರ ಗಣನೆಗೆ ತೆಗೆದುಕೊಂಡು ಮಂಡಿಸುತ್ತಿದ್ದ ನಿರ್ಣಯಗಳೇ ಆಗಿರುತ್ತಿದ್ದವು. ಇದರಿಂದ ದೇಶೀಯ ಸಂಸ್ಥಾನಗಳ (princely states) ಕನ್ನಡಿಗರು ಏಕೀಕರಣದ ಬಗ್ಗೆ ಅಂಥ ತುರ್ತನ್ನು ತೋರ್ಪಡಿಸಲು ಸಾಧ್ಯ ಆಗಲಿಲ್ಲ. ಈ ಮಾತು ಮೈಸೂರು ಸಂಸ್ಥಾನಕ್ಕೂ ಅನ್ವಯಿಸುತ್ತದೆ. ಕಾಂಗ್ರೆಸ್ಸಿನ ನಿಲುವುಗಳು ಸಾಂಸ್ಕೃತಿಕ ಸಂಘ-ಸಂಸ್ಥೆಗಳ ಮೇಲೆ ತನ್ನ ಪ್ರಭಾವವನ್ನು ಬೀರದೆ ಇರಲಿಲ್ಲ. ಉದಾಹರಣೆಗೆ **ಕನ್ನಡ ಸಾಹಿತ್ಯ ಪರಿಷತ್ತು** ಸಾಹಿತ್ಯ ಸಮ್ಮೇಳನಗಳಲ್ಲಿ ತೆಗೆದುಕೊಂಡಿರುವ ನಿರ್ಣಯಗಳು. ಅಂದರೆ ತನ್ನ ಆರಂಭಿಕ ಮಡಿವಂತಿಕೆಯನ್ನು ಬಿಟ್ಟು ಪರಿಷತ್ತು ಏಕೀಕರಣದ ಬಗೆಯ 'ರಾಜಕೀಯ ವಿಚಾರ'ಗಳನ್ನು ಸಾಂಸ್ಕೃತಿಕ ವೇದಿಕೆಯ ಮೇಲೆ ಚರ್ಚಿಸಲು ಆರಂಭಿಸಿತ್ತು. ಭಾಷಾಭಿಮಾನದ ಜೊತೆ ಜೊತೆಗೆ ರಾಜಕೀಯ ಏಕೀಕರಣದ ಪ್ರಕ್ರಿಯೆಗಳು ಪ್ರಸ್ತಾಪಕ್ಕೆ ಬರತೊಡಗಿದವು.[೨೧]

ಮೈಸೂರಿನ 'ಮಹಾರಾಜರ ರಜತ ಮಹೋತ್ಸವ'ವು ೧೯೨೭ ರಲ್ಲಿ ನಡೆಯಿತು. ಈ ಸಂದರ್ಭದಲ್ಲಿ ಕನ್ನಡಿಗರು ರಾಜಮನೆತನದ ಮೇಲಿನ ಅಭಿಮಾನದ ಜೊತೆಗೆ ಏಕೀಕರಣದ ಪ್ರತೀಕವಾಗಿಯೂ ವಿಜೃಂಭಣೆಯಿಂದ ಆಚರಿಸಿದ್ದೂ ಉಂಟು. ೧೯೨೮ ರ ವೇಳೆಗೆ **ಮಂಗಳವೇಡೆ, ಯು. ರಾಮರಾಯ** ಮೊದಲಾದ ಏಕೀಕರಣವಾದಿಗಳು **ನೀಲಗಿರಿ** ಮೊದಲಾದ ಪ್ರದೇಶಗಳಲ್ಲಿ ಏಕೀಕರಣದ ಪ್ರಚಾರ ಕಾರ್ಯವನ್ನು ಆರಂಭಿಸಿದ್ದರು. ೧೯೨೮ ರಲ್ಲಿಯ ಧಾರವಾಡದಲ್ಲಿ ನಡೆದ ಅನೇಕ ಸಮ್ಮೇಳನಗಳು, ಆಚರಣೆಗಳು ಏಕೀಕರಣದ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಿದವು. ಆಲೂರರು ಮತ್ತು ಅವರ ಗೆಳೆಯರು 'ಶ್ರೀ ವಿದ್ಯಾರಣ್ಯರ ಉತ್ಸವ'ವನ್ನು ಆಚರಿಸಲು ಮೊದಲ ಬಾರಿಗೆ ಕರೆಕೊಟ್ಟರು. ಈ ಆಚರಣೆಯು **ಮಹಾರಾಷ್ಟ್ರ**ದಲ್ಲಿ ತಿಲಕರಿಂದ ಆರಂಭಗೊಂಡ 'ಶಿವಾಜಿ ಉತ್ಸವ'ವನ್ನೇ ಹೋಲುತ್ತಿತ್ತು. ಅಂದಿನ **ಸ್ವಧರ್ಮ** ಪತ್ರಿಕೆಯು ವಿದ್ಯಾರಣ್ಯರ ಉತ್ಸವವನ್ನು **ನಾಡಹಬ್ಬ**ವನ್ನಾಗಿಸಲು ಪ್ರಚುರಪಡಿಸಿತು. ನಾಡಹಬ್ಬದ ಪರಿಕಲ್ಪನೆಯನ್ನು ಇವರಿಗಿಂತಲೂ ಎರಡು ವರುಷಗಳಿಗೆ

ಮುಂಚೆಯೇ (೧೯೨೬ ರಲ್ಲಿ) ಹುಟ್ಟು ಹಾಕಿದ್ದುದು ದಾಖಲು ಆಗಿದೆ. ಅಂದರೆ **ದ.ರಾ. ಬೇಂದ್ರೆ** ಮತ್ತು **ಬೆಟಗೇರಿ ಕೃಷ್ಣಶರ್ಮ** ಅವರುಗಳು ವಿದ್ಯಾವರ್ಧಕ ಸಂಘದಡಿಯಲ್ಲಿ 'ನವರಾತ್ರಿ ಹಬ್ಬ'ವನ್ನು **ನಾಡಹಬ್ಬ**ವನ್ನಾಗಿ ಆಚರಿಸುವಂತೆ ಮಾಡಿದ್ದರು.[೨] ಈ ಚಿಂತನೆಗಳು ಕನ್ನಡಿಗರನ್ನು ಸಾಂಸ್ಕೃತಿಕವಾಗಿ ಬೆಸೆಯಲು ಮಾಧ್ಯಮಗಳಾಗಿದ್ದವು. ಆ ಮೂಲಕ ಏಕೀಕರಣದ ಆಶಯವನ್ನು ಸಾಕಾರಪಡಿಸಿಕೊಳ್ಳುವ ಪ್ರಯತ್ನಗಳನ್ನು ವ್ಯವಸ್ಥಿತವಾಗಿ ಮಾಡಲಾಗುತ್ತಿತ್ತು. ಈ ಸನ್ನಿವೇಶದಲ್ಲಿ ಪ್ರಾಂತ್ಯಾಭಿಮಾನ, ರಾಷ್ಟ್ರಾಭಿಮಾನಗಳ ಆದ್ಯತೆಯ ಬಗ್ಗೆ ಪ್ರಶ್ನೆಗಳು ಹುಟ್ಟಿಕೊಳ್ಳದೆ ಇರಲಿಲ್ಲ. ಆದರೆ ವಸಾಹತುಶಾಹಿ ಆಡಳಿತವನ್ನಂತು ಮೊಟಕುಗೊಳಿಸುವುದರಲ್ಲಿ ಯಾವುದೇ ಭಿನ್ನತೆಗಳು ಇರಲಿಲ್ಲ.

ಸರಕಾರವು ೧.೭.೧೯೨೮ ರೊಳಗಾಗಿ ಇಂಡಿಯಾದ ರಾಜ್ಯ ಘಟನೆಯ ತತ್ವಗಳನ್ನು ಅನುಷ್ಠಾನಗೊಳಿಸುವ ನಿರ್ಣಯವನ್ನು ತೆಗೆದಕೊಂಡಿತು. ಈ ಬಗ್ಗೆ ವಿಚಾರ ಮಾಡಲು ಒಂಬತ್ತು ಜನ ಸದಸ್ಯರ ಸಮಿತಿ ನೇಮಕವಾಗಿತ್ತು. ಈ ಸಮಿತಿಗೆ **ಮೋತಿಲಾಲ್ ನೆಹರು** ಅವರೇ ಅಧ್ಯಕ್ಷರು. ಕರ್ನಾಟಕದ ಪರವಾಗಿ **ಹೊಸಕೊಪ್ಪ ಕೃಷ್ಣರಾಯರು** ದೆಹಲಿಗೆ ಹೋಗಿ ಸರ್ವ ಪರಿಷತ್ತಿನ ಮುಂದೆ (೧೨.೨.೧೯೨೮ ರಂದು) ಏಕೀಕರಣದ ಅಹವಾಲನ್ನು ಕೊಟ್ಟು ಬಂದಿದ್ದರು. ಅಂತೆಯೇ ಎಲ್ಲ ಸಂಘ-ಸಂಸ್ಥೆಗಳನ್ನು ತಮ್ಮ ತಮ್ಮ ಪ್ರತಿನಿಧಿಗಳನ್ನು ಕಳುಹಿಸಿಕೊಡಲು ಮುಂದಾಗಿದ್ದವು. ಕೆ.ಪಿ.ಸಿ.ಸಿ.ಯಿಂದ **ಕೌಜಲಗಿ ಶ್ರೀನಿವಾಸರಾಯರು**, 'ಕರ್ನಾಟಕ ಏಕೀಕರಣ ಸಂಘ'ದ ಪರವಾಗಿ ಅದರ ಅಧ್ಯಕ್ಷ **ಚಿಕ್ಕೋಡಿ ಪಂಡಿತರಾಯಪ್ಪ** ಹೋಗಿದ್ದರು. ಏಕೀಕರಣದ ಮಾಹಿತಿ, ಅಂಕಿ-ಅಂಶಗಳನ್ನೊಳಗೊಂಡ ಪತ್ರಿಕೆಯೊಂದನ್ನು ಅಚ್ಚುಹಾಕಿಸಿ ಅಲ್ಲಿ ಹಂಚಲಾಯಿತು. ೧೯.೬.೧೯೨೮ ರಂದು ಅಲಹಾಬಾದಿನಲ್ಲಿ ಸರ್ವ ಪಕ್ಷಗಳ ಸಮಿತಿಯ ಸಭೆ ನಡೆಯುವುದಿತ್ತು. ಇದಕ್ಕೆ ಕೆ.ಪಿ.ಸಿ.ಸಿ. ಹಾಗೂ ಕರ್ನಾಟಕ ಏಕೀಕರಣ ಸಂಘಗಳೆರಡೂ ಸೇರಿ ತಮ್ಮ ಒಬ್ಬ ಪ್ರತಿನಿಧಿಯನ್ನು ಕಳುಹಿಸಿಕೊಡಲು ನಿರ್ಧರಿಸಿದವು. ಆಯ್ಕೆ ಆದವರು ಕಾಂಗ್ರೆಸ್ ಧುರೀಣರಾದ **ರಂ.ರಾ. ದಿವಾಕರ** ಅವರು. ದಿವಾಕರರು ಏಕೀಕರಣವನ್ನು ಸಮರ್ಥಿಸಿಕೊಳ್ಳಲು ಸಾಕಷ್ಟು ಸಾಕ್ಷಿ-ಪುರಾವೆಗಳನ್ನು ಒದಗಿಸಿ ಮನವಿ ಸಲ್ಲಿಸಿದರು. ಎಲ್ಲವನ್ನೂ ಪರಿಶೀಲಿಸದೆ **ನೆಹರು ಸಮಿತಿ** ಕರ್ನಾಟಕದ ಏಕೀಕರಣವನ್ನು ಕುರಿತಂತೆ ತನ್ನ ವರದಿಯಲ್ಲಿ ಕೆಲವು ನಿರ್ಣಯಗಳನ್ನು ತೆಗೆದುಕೊಂಡಿತ್ತು. ಅದರಲ್ಲಿ -

> "In our opinion a strong prima facic case for unification and the formation of Karnatak as a separate province was made. Financially, the

> position of Karnatak was very strong and even at present, there was considerable surplus in the British Part of Karnatak.... parts of Karnatak should be separated from the provinces in which they are at present included and formed into a single separate province."[೩೩]

- ಎಂದು ಸ್ಪಷ್ಟಪಡಿಸಲಾಗಿದೆ. ಇದರಲ್ಲಿ ಕರ್ನಾಟಕ ಮತ್ತು ಆಂಧ್ರ ಪ್ರಾಂತ್ಯಗಳ ರಚನೆ ಬಗ್ಗೆ ಸ್ಪಷ್ಟವಾಗಿ ಹೇಳಲಾಗಿತ್ತು. ಆದರೆ ಮೈಸೂರು ಸಂಸ್ಥಾನದ ಕೆಲವು ಭಾಗಗಳನ್ನು ಸೇರಿಸಲು ಮುಂದೆ ಬಂದಿರಲಿಲ್ಲ. ಅಲ್ಲದೆ **ಬ್ರಿಟಿಷ್ ಕರ್ನಾಟಕ**ವನ್ನು ಒಂದುಗೂಡಿಸಲು ಹೆಚ್ಚಿನ ಒತ್ತು ನೀಡಲಾಗಿತ್ತು. ಆದರೆ ದೇಶಿಯ ಸಂಸ್ಥಾನಗಳ ಬಗೆಗೆ ಸ್ಪಷ್ಟ ನಿಲುವು ತೆಗೆದುಕೊಂಡಿರಲಿಲ್ಲ. ಹೀಗಾಗಿ **ನೆಹರು ವರದಿಯು** ಕನ್ನಡಿಗರಿಗೆ ತೃಪ್ತಿಯನ್ನು ನೀಡಲಿಲ್ಲ. ಇದರಿಂದ ಏಕೀಕರಣ ಚಳವಳಿ ಚಾಲ್ತಿಯಲ್ಲಿಯೆ ಇರಬೇಕಾಯಿತು.

ಮರಾಠಿಗರು 'ಬೃಹನ್ಮಹಾರಾಷ್ಟ್ರ' ಪರಿಕಲ್ಪನೆಯ ಕನಸುಗಾರರು. ಕನ್ನಡದ ಪ್ರದೇಶಗಳನ್ನು ಸಹ ಈ ಪರಿಕಲ್ಪನೆಯ ಪರಿಧಿಯೊಳಗೆ ಸೇರಿಸಿಕೊಳ್ಳುವುದು ಇವರ ಹುನ್ನಾರಗಳಲ್ಲಿ ಒಂದು. ಈ ಹಿನ್ನೆಲೆಯಲ್ಲಿ ೧೯೨೯ ರಲ್ಲಿ ಮರಾಠಿಗರು **ಬೆಳಗಾವಿ**ಯಲ್ಲಿ **ಮರಾಠಿ ಸಾಹಿತ್ಯ ಸಮ್ಮೇಳನ**ವನ್ನು ನಡೆಸಲು ಹಟತೊಟ್ಟದ್ದು ಗಮನಿಸಬೇಕಾದ ಸಂಗತಿ. ಈ ಸಂದರ್ಭದಲ್ಲಿ ಕನ್ನಡಿಗರು ಮೌನದಿಂದ ಇರುವಂತಿರಲಿಲ್ಲ. ಜೊತೆಗೆ ಪ್ರತಿಭಟಿಸುವ ಅವಕಾಶವನ್ನು ಬಳಸಿಕೊಂಡು ಏಕೀಕರಣ ಕಲ್ಪನೆಗೆ, ಚಳವಳಿಗೆ ಮಹತ್ವ ಬರುವಂತೆ ಮಾಡಬೇಕಿತ್ತು. ಎಲ್ಲವನ್ನು ಪರಿಶೀಲಿಸಿದ **ಬಿ.ಎಂ. ಶ್ರೀಕಂಠಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್** ಮೊದಲಾದ ಹಿರಿಯ ಸಾಹಿತಿಗಳು ಬೆಳಗಾವಿಗೆ ಬಂದು ಮರಾಠಿ ಸಾಹಿತ್ಯ ಸಮ್ಮೇಳನವನ್ನು ಪ್ರತಿಭಟಿಸಿದರು. ಈ ಸಂದರ್ಭದಲ್ಲಿ **ಮೊದಲಿಯಾರ್** ಮೊದಲಾದ ರಾಜಕಾರಣಿಗಳು ಪ್ರತಿಭಟಿಸಿದ್ದು ಸಮಯೋಚಿತವಾದುದು. ಈ ಪ್ರತಿಭಟನೆಗಳು ಜನತೆಯನ್ನು ಏಕೀಕರಣ ಕಾರ್ಯಕ್ರಮಗಳಿಗೆ ಇನ್ನಷ್ಟು ಸೆಳೆದುಕೊಂಡವು. ಇದೇ ಸಂದರ್ಭ ವನ್ನು ಉಪಯೋಗಿಸಿಕೊಂಡ ಏಕೀಕರಣವಾದಿಗಳು **ಕೇಶವದಾಸ** ಮತ್ತು **ಶಿವಮೂರ್ತಿ** ಸ್ವಾಮಿಗಳಿಂದ ಕೀರ್ತನೆಗಳನ್ನು ಹಾಡಿಸಿ ಆ ಮೂಲಕ ಏಕೀಕರಣದ ಪ್ರಚಾರವನ್ನು ಮಾಡಿಸಿದರು.

**ಮೊಂಟೆಗೊ-ಚೆಲ್ಮ್ಸ್‌ಫರ್ಡ್** (೧೯೧೯) ಜಾರಿಗೆ ತಂದಿದ್ದ ಸುಧಾರಣೆಗಳ ಕಾರ್ಯಗತದ ಬಗೆಗೆ ಪರಿಶೀಲಿಸಿ ವರದಿ ನೀಡಲು ಬ್ರಿಟಿಷ್ ಪಾರ್ಲಿಮೆಂಟು ಒಂದು ಆಯೋಗವನ್ನು ರಚಿಸಿತ್ತು (೧೯೨೭ ನವೆಂಬರ್). ಆ ಆಯೋಗವೆ **ಸೈಮನ್ ಕಮಿಷನ್**. ಬಿಳಿಯರನ್ನೇ ಒಳಗೊಂಡಿದ್ದ ಈ ಸಮಿತಿಯುನ್ನು **ಮದ್ರಾಸಿನ ಜಸ್ಟೀಸ್ ಪಾರ್ಟಿ** ಹಾಗೂ **ಪಂಜಾಬಿನ ಯೂನಿಯನಿಸ್ಟ್ ಪಾರ್ಟಿ**ಗಳೆರಡನ್ನು ಬಿಟ್ಟು ಉಳಿದೆಲ್ಲ ರಾಜಕೀಯ ಪಕ್ಷಗಳು ವಿರೋಧಿಸಿ, ಬಹಿಷ್ಕರಿಸಿದವು. ಅನೇಕ ವಿರೋಧಗಳ ನಡುವೆಯು ಕೆಲವು ಕಾಂಗ್ರೆಸ್ಸಿಗರು ಏಕೀಕರಣದ ಬಗೆಗಿನ ಅಂಕಿ-ಅಂಶಗಳನ್ನು ಆಯೋಗಕ್ಕೆ ಸಲ್ಲಿಸಿದರು. ಆದರೂ ೧೯೩೦ ರಲ್ಲಿ ಹೊರಬಿದ್ದ ಕಮಿಷನ್ನಿನ ವರದಿಯಲ್ಲಿ ಕನ್ನಡಿಗರಿಗೆ ಹೆಚ್ಚಿನ ಅನುಕೂಲಗಳಾಗಲಿಲ್ಲ. ಆದರೆ ಭಾಷಾ ತತ್ವಕ್ಕೆ ಈ ಸಮಿತಿ ತನ್ನ ಒಪ್ಪಿಗೆಯನ್ನು ಸೂಚಿಸಿತ್ತು.[೩೪]

ಈ ಮಧ್ಯೆ **ಕರ್ನಾಟಕತ್ವ**ದ ಹರಿಕಾರರೆನಿಸಿಕೊಂಡ **ಆಲೂರ ವೆಂಕಟರಾಯರು** ೧೬ನೆಯ ಸಾಹಿತ್ಯ ಸಮ್ಮೇಳನ (೧೯೩೦, ಮೈಸೂರು)ದ ಅಧ್ಯಕ್ಷರಾಗಿ ಆಯ್ಕೆ ಆಗಿದ್ದರು. ಮೈಸೂರಿಗರು ಏಕೀಕರಣದ ಬಗ್ಗೆ ಹೆಚ್ಚಿನ ಒಲವನ್ನು ಅಭಿವ್ಯಕ್ತಿಸುವುದು ಅಗತ್ಯ ಇತ್ತು. ಈ ಬಗ್ಗೆ ಅವರನ್ನು ಪ್ರೇರೇಪಿಸಲು ಆಲೂರರು ಪ್ರಯತ್ನಿಸಿದರು. ಅವರು ಏಕೀಕರಣ ಮತ್ತು ಅಖಿಲ ಕರ್ನಾಟಕವನ್ನು ಪ್ರತಿನಿಧಿಸುವ ವಿಶ್ವವಿದ್ಯಾಲಯದ ಸ್ಥಾಪನೆ ಬಗ್ಗೆ ಮಾತನಾಡುತ್ತಾ -

> "ಚತುರ್ಮುಖವಾದ ಕರ್ನಾಟಕವು ಏಕಮುಖವಾಗಬೇಕಾಗಿದೆ ....... ಆದುದರಿಂದ ಕನ್ನಡಿಗರೇ ಏಳಿರಿ, ಅಖಿಲ ಕರ್ನಾಟಕ ವಿಶ್ವವಿದ್ಯಾಲಯವನ್ನು ಸ್ಥಾಪಿಸುವುದಕ್ಕೋಸ್ಕರ ಟೊಂಕ ಕಟ್ಟಿರಿ. ಕರ್ನಾಟಕ ವಿಶ್ವವಿದ್ಯಾಲಯವಿಲ್ಲದವರೆಗೆ ನಮ್ಮ ಸಾಹಿತ್ಯ ದೇವತೆ ಪದಭ್ರಷ್ಟೆ. ಆದಾದ ಮೇಲೆಯೇ ಅವಳ ಪ್ರಾಣ ಪ್ರತಿಷ್ಠೆ"[೩೫]

- ಎನ್ನುವುದರ ಮೂಲಕ ಉತ್ಸಾಹ ತುಂಬಿದರು. ಇವರ ಅಧ್ಯಕ್ಷೀಯ ಭಾಷಣವು ಮೈಸೂರಿಗರನ್ನು ಏಕೀಕರಣದ ಚಳವಳಿಗೆ ಇನ್ನಷ್ಟು ಜನರನ್ನು ತೊಡಗಿಸಿಕೊಳ್ಳಲು ಪ್ರೇರಣೆ ನೀಡಿತ್ತು.

೧೯೩೧ ರಲ್ಲಿ ಲಂಡನ್ನಿನ **ದುಂಡುಮೇಜಿನ ಸಭೆ** ನಡೆಯಲಿದ್ದು ಅದಕ್ಕೆ ಭಾರತೀಯ ಕಾಂಗ್ರೆಸ್ ಪಕ್ಷವು **ಗಾಂಧಿ** ಅವರನ್ನು ತನ್ನ ಪ್ರತಿನಿಧಿಯೆಂದು ಆರಿಸಿತು. ಈ ಸಂದರ್ಭವನ್ನೂ

ಕನ್ನಡಿಗರು ಉಪಯೋಗಿಸಿಕೊಳ್ಳದೆ ಇರಲಿಲ್ಲ. ಅಂದರೆ ಈ ಸಭೆಗೆ ಏಕೀಕರಣದ ಬಗ್ಗೆ ಪ್ರಸ್ತಾಪಿಸಲು **ಬೆನಗಲ್ ರಾಮರಾವ್, ಬೆನಗಲ್ ಶಿವರಾವ್** ಲಂಡನ್ನಿಗೆ ಹೊರಟರು. ಇವರೊಂದಿಗೆ **ಮಿರ್ಜಾ ಇಸ್ಮಾಯಿಲ್**‌ರೂ ಇದ್ದರು. ಈ ಮಧ್ಯೆ ಕಾರವಾರದ ವಾರ್ಷಿಕ ಅಧಿವೇಶನ (೧೯೩೧), ಧಾರವಾಡದಲ್ಲಿನ ಸ್ವತಂತ್ರವಾದ ವಿಶೇಷ ಅಧಿವೇಶನ (೧೯೩೨), 'ಕರ್ನಾಟಕ ವಣಿಕ್ ಸಂಘ'ದವರ ಚಟುವಟಿಕೆಗಳು ರಾಷ್ಟ್ರೀಯ ಹೋರಾಟದ ಜೊತೆ ಜೊತೆಗೆ ಏಕೀಕರಣ ಚಳವಳಿಯನ್ನೂ ಮುನ್ನಡೆಸಿದವು. ಆಂಧ್ರದ ತೆಲುಗರ ಆಕ್ರಮಣಕಾರಿ ಪ್ರವೃತ್ತಿಗಳು ಹೆಚ್ಚಾಗುತ್ತಿದ್ದುದರಿಂದ **ಜಂಗಿನ ಮುರಿಗೆಯ್ಯ, ಮಂಗಳವೇಡೆ ಶ್ರೀನಿವಾಸರಾವ್** ಮೊದಲಾದವರುಗಳು **ಬಳ್ಳಾರಿ**ಯಾದ್ಯಂತ ಪ್ರವಾಸ ಕೈಗೊಂಡರು. ಇವರು **ಆದವಾನಿ, ಆಲೂರ, ರಾಯದುರ್ಗ** ಮೊದಲಾದ ಕನ್ನಡ ತಾಲ್ಲೂಕಗಳನ್ನು ಆಂಧ್ರಕ್ಕೆ ಸೇರಿಸಿದ್ದು ಸಮಂಜಸವಲ್ಲ ಎಂದು ಪ್ರತಿಭಟಿಸಿದರು. ಈ ಕುರಿತು ಭಾಷಣ, ಪತ್ರಿಕಾ ಪ್ರಕಟನೆ, ವ್ಯಾಖ್ಯಾನ ಮೊದಲಾದವುಗಳ ಮೂಲಕ ಪ್ರಚುರಪಡಿಸಲಾಗುತ್ತಿತ್ತು. ಅಷ್ಟೇ ಅಲ್ಲದೆ **ಮದ್ರಾಸ್, ಕೊಡಗು, ಧಾರವಾಡ, ಬೆಳಗಾವಿ**ಗಳಿಗೆ ಭೇಟಿ ಕೊಟ್ಟು ವೈಸ್‌ರಾಯ್‌ರಿಗೆ ಶಿಷ್ಟಮಂಡಲವನ್ನು ಕಳುಹಿಸುವ ಕಾರ್ಯಗಳಲ್ಲಿ ತೊಡಗಿಸಿಕೊಂಡರು. ವಿಶೇಷವಾಗಿ **ಮಂಗಳವೇಡೆ** ಮತ್ತು **ಡಾ. ಕಮಲಾಪುರ್** ಅವರುಗಳು ವೈಸ್‌ರಾಯರಿಗೆ ಪ್ರತ್ಯೇಕ ಮನವಿ ಸಲ್ಲಿಸಿದ್ದೂ ಉಂಟು. ವಿದ್ಯಾವರ್ಧಕ ಸಂಘವು ಈ ಸನ್ನಿವೇಶದಲ್ಲಿ ತನ್ನದೇ ಆದ ರೀತಿಯಲ್ಲಿ ಪ್ರತಿಕ್ರಿಯಿಸಿತು. ೨.೨.೧೯೩೫ ರಂದು ಸಂಘವು ವೈಸರಾಯರಿಗಷ್ಟೇ ಅಲ್ಲದೇ **ಕೇಂದ್ರ ಶಾಸನಸಭೆ**ಯ ಎಲ್ಲ ಕನ್ನಡ ಸದಸ್ಯರಿಗೆ ಏಕೀಕರಣದ ಬಗ್ಗೆ ಸೂಕ್ತ ಹಾಗೂ ಶೀಘ್ರ ಕ್ರಮಕೈಗೊಳ್ಳಲು ಒತ್ತಡ ತಂದಿತು. ಹೀಗೆ ಒಂದಲ್ಲಾ ಒಂದು ರೀತಿಯಲ್ಲಿ ಏಕೀಕರಣದ ಪ್ರಕ್ರಿಯೆಗಳು ನಡೆಯುತ್ತಲೇ ಇದ್ದವು.

೧೯೨೧ ರಿಂದ ೧೯೩೫ ರವರೆಗೆ ಮುಂಬಯಿ, ಮದ್ರಾಸ್, ಕೊಡಗು ಪ್ರಾಂತ್ಯಗಳ **ಶಾಸನ ಮಂಡಳಿ**ಗಳಲ್ಲಿ, **ದೆಹಲಿಯ ಅಸೆಂಬ್ಲಿ**ಯಲ್ಲಿ ಹಾಗೂ **ಕೌನ್ಸಿಲ್ ಆಫ್ ಸ್ಟೇಟ್**‌ಗಳಲ್ಲಿ ಏಕೀಕರಣವನ್ನು ಕುರಿತ ತೀರ್ಮಾನ, ಗೊತ್ತುವಳಿಗಳನ್ನು ಸ್ವೀಕರಿಸುವ ಪ್ರಯತ್ನಗಳು ಹೆಚ್ಚಿನ ಸಂಖ್ಯೆಯಲ್ಲಿ ನಡೆದಿವೆ. ಈ ರೀತಿಯ ಪ್ರಯತ್ನಗಳಿಗೆ ಅಂದಿನ ಎ.ಬಿ. ಲಠ್ಠೆ, **ರಾಮರಾವ್, ವಿ.ಎನ್. ಜೋಗ್, ಬೆನಗಲ್ ಶಿವರಾವ್, ಕೆ.ಆರ್. ಕಾರಂತ, ಎಂ.ಪಿ. ಪಾಟೀಲ್, ಭಟ್ಟ, ಹೊಸಮನಿ, ಬೆಳ್ಳಪ್ಪ** ಮೊದಲಾದ ಧುರೀಣರು ಕಾರಣಕರ್ತರು. ಆದರೆ ೧೯೩೫ ರವರೆವಿಗೂ ವಿವಿಧ ಸಂಘ-ಸಂಸ್ಥೆ ಹಾಗೂ ಮಂತ್ರಿ ಪದವಿಗಳಲ್ಲಿದ್ದ **ಸರ್ ಸಿದ್ದಪ್ಪ ಕಂಬಳಿ** ಅವರು ಏಕೀಕರಣಕ್ಕಾಗಿ ನಿರೀಕ್ಷಿಸಿದ್ದಷ್ಟು ಮಾಡಲಿಲ್ಲ ಎಂಬ ಆಪಾದನೆ ಇದೆ.[೩೬]

೧೯೩೬ ರ ಡಿಸೆಂಬರ್ ೨೫ ರಿಂದ ೨೭ ರವರೆಗೆ ಮೂರು ದಿನಗಳು ಹಂಪಿಯಲ್ಲಿ **ಷಟ್ ಶತಮಾನೋತ್ಸವವನ್ನು** ಆಚರಿಸುವುದು ಎಂದು ತೀರ್ಮಾನ ಆಗಿತ್ತು. ವಿಜಯನಗರ ಸ್ಥಾಪನೆಯ ಆರು ನೂರು ವರ್ಷಗಳ (೧೩೩೬-೧೯೩೬) ನೆನಪಿಗಾಗಿ ಈ ಸ್ಮಾರಕೋತ್ಸವವನ್ನು ಯೋಜಿಸಲಾಗಿತ್ತು. ಈ ಉತ್ಸವದ ಅಧ್ಯಕ್ಷತೆ ವಹಿಸಿ ಕೊಂಡಿದ್ದವರು **ಕು. ಶಂಕರಾಚಾರ್ಯ** ಅವರು. ಸುಮಾರು ೩೦-೪೦ ಸಾವಿರದವರೆವಿಗೂ ನೆರೆದಿದ್ದ ಕನ್ನಡಿಗರು ತಮ್ಮ ನಾಡಿನ ಸಾಹಿತ್ಯ-ಸಂಸ್ಕೃತಿಗಳನ್ನು ಸಂಕೇತಿಸುವಂತೆ ಮಾಡಿದರು. ಇದು ಏಕೀಕರಣ ಚಳವಳಿಯ ಸಂದರ್ಭದಲ್ಲಿ ನಡೆದುದರಿಂದ ಜನರಲ್ಲಿ ಹೆಚ್ಚಿನ ದೃಢತೆ ತಂದುಕೊಟ್ಟಿತು. ಮುಂದೆ ನಡೆದ **ನಿಜಗುಣ ಶಿವಯೋಗಿ, ಕುಮಾರವ್ಯಾಸ, ಪಂಪ, ವಿದ್ಯಾರಣ್ಯ, ಪುರಂದರ, ಬಸವೇಶ್ವರ** ಇತ್ಯಾದಿ ಉತ್ಸವಗಳಿಗೆ ವಿಜಯನಗರ ಸ್ಮಾರಕೋತ್ಸವವೇ ಬುನಾದಿ. ಆ ಮೂಲಕ ಕನ್ನಡಿಗರಲ್ಲೂ ಸಾಹಿತ್ಯಕ, ಚಾರಿತ್ರಿಕ ಹಾಗೂ ಧಾರ್ಮಿಕ ಸಂಕೇತಗಳನ್ನು ಬಳಸುವುದು ವಾಡಿಕೆಗೆ ಬಂದಿತು. ಇದು ಮಹಾರಾಷ್ಟ್ರದ ತಿಲಕ್ ಪ್ರಭಾವಿತ ವ್ಯಕ್ತಿಗಳಿಂದಾದ ಪರಂಪರೆ ಆಗಿತ್ತು ಎಂಬುದರಲ್ಲಿ ಎರಡು ಮಾತಿಲ್ಲ. ೧೯೩೬ ರಲ್ಲಿಯೇ ಬೆಳಗಾವಿಯಲ್ಲಿ ನಡೆದ ಏಕೀಕರಣ ಸಮ್ಮೇಳನದಲ್ಲಿ ತೆಗೆದುಕೊಂಡ ನಿರ್ಣಯ ಭಿನ್ನವಾದುದು ಹಾಗೂ ಬಹಳ ಮುಖ್ಯವಾದುದು. ಅಂದರೆ ಇಲ್ಲಿ ಅದುವರೆವಿಗೂ ಸ್ವೀಕರಿಸುತ್ತಿದ್ದ 'ಬ್ರಿಟಿಷ್ ಕರ್ನಾಟಕ ಪ್ರದೇಶ'ಗಳು ಮೊದಲು ಏಕೀಕರಣಗೊಳ್ಳಬೇಕು ಎಂಬ ನಿರ್ಣಯವನ್ನು ಕೈಬಿಟ್ಟರು. ಬದಲಾಗಿ 'ದೇಶಿ ಸಂಸ್ಥಾನ'ಗಳನ್ನು ಒಳಗು ಮಾಡಿಕೊಂಡು 'ಅಖಿಲ ಕರ್ನಾಟಕ'ದ ನಿರ್ಮಾಣ ಆಗಬೇಕು ಎಂಬ ನಿರ್ಣಯವನ್ನು ಆಶಯವನ್ನು ವ್ಯಕ್ತಪಡಿಸಲಾಯಿತು.

೧೯೩೭ ರ ವೇಳೆಗೆ ರಾಷ್ಟ್ರೀಯ ಹಾಗೂ ಪ್ರಾಂತೀಯ ಮಟ್ಟಗಳೆರಡರಲ್ಲೂ ಅನೇಕ ಪಲ್ಲಟಗಳುಂಟಾದವು. ಈ ವೇಳೆಗಾಗಲೆ **ಸಿಂಧ್** ಮತ್ತು **ಒರಿಸ್ಸಾ** ಪ್ರಾಂತ್ಯಗಳು ಅಸ್ತಿತ್ವಕ್ಕೆ ಬಂದು **ಕರ್ನಾಟಕ-ಆಂಧ್ರ-ಕೇರಳದ** ಜನರು ಭಾಷೆಗಳನ್ವಯ ತಮಗೂ ಹೊಸ ಪ್ರಾಂತ್ಯಗಳನ್ನು ಸೃಷ್ಟಿಸಬೇಕು ಎಂದು ಒತ್ತಡ ತಂದರು. ಬೇರೆ ಭಾಷಿಕರು ಕಾಂಗ್ರೆಸಿನಿಂದ ಹೊರಗೆ ನಿಂತು ಭಾಷಾ ಚಳವಳಿಗಳನ್ನು ಮಾಡುತ್ತಿದ್ದರು. ಆದರೆ ಕನ್ನಡಿಗರು ಮಾತ್ರ ಹಾಗಿರಲಿಲ್ಲ. ಕಾಂಗ್ರೆಸಿನ ಆಶ್ವಾಸನೆಗಳಿಗೆ ಕಿವಿಗೊಟ್ಟು ಮುಂದುವರೆದಿದ್ದರು. ಈ ಮಧ್ಯೆ ೧೦.೧೦.೧೯೩೭ ರಂದು ಎಲ್ಲ ಕನ್ನಡ ಪ್ರದೇಶಗಳಲ್ಲಿಯೂ **ಏಕೀಕರಣ ದಿನವನ್ನಾಗಿ** ಆಚರಿಸಲು ಕರೆ ನೀಡಲಾಗಿತ್ತು. ಅದರಂತೆ ಕನ್ನಡಿಗರು ಈ

ದಿನವನ್ನು ಬಹಳ ಉತ್ಸುಕತೆಯಿಂದ, ಒಗ್ಗಟ್ಟಿನಿಂದ ಆಚರಿಸಿದ್ದರು. ೧೯೩೫ ರ ಸುಧಾರಣಾ ಕಾನೂನಿನ್ವಯ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ನಿಚ್ಚಲ ಬಹುಮತ ಪಡೆದಿದ್ದುದು ಕಾಂಗ್ರೆಸ್ ಪಕ್ಷ. ಮುಂಬಯಿ ಮತ್ತು ಮದ್ರಾಸ್ ಶಾಸನಸಭೆಗಳಲ್ಲಿಯೂ ಕಾಂಗ್ರೆಸಿಗರದೆ ಮೇಲುಗೈ. ಹೀಗಾಗಿ ಕೆ.ಪಿ.ಸಿ.ಸಿ. ಭಾಷಾ ತತ್ವವನ್ನು ಅನುಷ್ಠಾನಗೊಳಿಸುವುದೆಂಬ ನಂಬಿಕೆ ಜನರಲ್ಲಿ ಬಹಳ ಒತ್ತರವಾಗಿತ್ತು. ಇದರಿಂದ ಕಾಂಗ್ರೆಸ್ ಹಾಗೂ ಕರ್ನಾಟಕ ಏಕೀಕರಣ ಸಂಘಗಳೆರಡೂ ಸೇರಿ ಒಂದು 'ಶಿಷ್ಟ ಮಂಡಲ'ವನ್ನು ರಚಿಸಿಕೊಂಡವು. ಆ ಮೂಲಕ ೧೯೩೮ ರಲ್ಲಿ ವಾರ್ಧಾದಲ್ಲಿ ನಡೆಯಲಿದ್ದ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಮುಂದೆ ಏಕೀಕರಣದ ಪ್ರಶ್ನೆಯನ್ನು ಇಟ್ಟು ಒತ್ತಾಯಿಸುವುದು ಈ ಮಂಡಲದ ಯೋಜನೆ ಆಗಿತ್ತು. ಇದೇ ರೀತಿಯಲ್ಲಿ ಆಂಧ್ರ ಹಾಗೂ ಕೇರಳದ ಜನರು ಒತ್ತಡ ತಂದರು. ಆದರೆ ಕಾರ್ಯಕಾರಿ ಸಮಿತಿಯು ತೆಗೆದುಕೊಂಡ ನಿರ್ಣಯವೇ ಬೇರೆ. ಅದು ಕೇಂದ್ರದಲ್ಲಿ ಕಾಂಗ್ರೆಸ್ ಅಧಿಕಾರಕ್ಕೆ ಬಂದೊಡನೆ ಈ ಸಮಸ್ಯೆಗಳನ್ನು ಬಗೆಹರಿಸುವುದಾಗಿ ಹೇಳಿತು. ಅಷ್ಟೇ ಅಲ್ಲದೆ ಅಲ್ಲಿಯವರೆವಿಗೂ ಯಾವುದೇ ರೀತಿಯ ಉದ್ವೇಗಕಾರಿ ನಿಲುವುಗಳನ್ನು ತೆಗೆದುಕೊಳ್ಳದೆ ಇರಲು ನಿರ್ದೇಶಿಸಿತು. ಇದರಿಂದ ಕನ್ನಡಿಗರಿಗೆ ನಿರಾಶೆಯಾಗದಿರಲಿಲ್ಲ.

ಮೈಸೂರು ಸಂಸ್ಥಾನದಲ್ಲಿ ಬೇರೆ ರೀತಿಯ ಪ್ರಕ್ರಿಯೆಗಳು ಆರಂಭ ಆಗಿದ್ದವು. ಅಂದರೆ ಇಲ್ಲಿನ ಬ್ರಾಹ್ಮಣೇತರ ಪಕ್ಷವಾದ ಪ್ರಜಾಮಿತ್ರ ಮಂಡಲಿಯು ಜಾತಿ-ಕೋಮು ಪ್ರಾತಿನಿಧ್ಯಗಳಿಗಾಗಿ ಸೆಣಸಾಟ ನಡೆಸಿ ತಾರತಮ್ಯಗಳನ್ನು ಹುಟ್ಟುಹಾಕಿತ್ತು. ಇದರ ಪರಿಣಾಮವೆ ಪ್ರಜಾಪಕ್ಷದ ಅಸ್ತಿತ್ವ. ಅಂದರೆ ಪ್ರಜಾಮಿತ್ರ ಮಂಡಲಿಯ ಪ್ರಗತಿಪರ ಹಾಗೂ ಪ್ರಭಾವಶಾಲಿ ಬ್ರಾಹ್ಮಣೇತರ ಯುವಕರು ಕೋಮುವಾರು ರಾಜಕೀಯದಲ್ಲಿ ನಂಬಿಕೆ ಕಳೆದುಕೊಂಡಿದ್ದರು. ಹೀಗಾಗಿ ಪ್ರತ್ಯೇಕ ವೇದಿಕೆಯನ್ನರಿಸಿ ಮಂಡಲಿಯನ್ನು ಒಡೆದು 'ಪ್ರಜಾಪಕ್ಷ' (೧೯೨೯-೩೦)ದ ಹೆಸರಿನಲ್ಲೆ ಒಂದೆಡೆ ಸೇರಿದರು.[೬] ಅಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿನ ರೈತ ಸಂಘಟನೆಗಳೊಂದಿಗೆ ಉತ್ತಮ ನೆಂಟನ್ನು ಬೆಳೆಸಿಕೊಂಡರು. ಈ ಪಕ್ಷವು ಡಿ.ಎಸ್. ಮಲ್ಲಪ್ಪ, ಬಿ.ಎನ್. ಗುಪ್ತಾ ಇನ್ನು ಮೊದಲಾದವರ ಧುರೀಣತ್ವದಲ್ಲಿ ಮುಂದುವರೆದಿತ್ತು. ಆದರೆ ಇದು ಬಹಳ ಕಾಲ ಮುಂದುವರೆಯಲು ಆಗಲಿಲ್ಲ. ಪ್ರಜಾಮಿತ್ರ ಮಂಡಲಿ ಹಾಗೂ ಪ್ರಜಾಪಕ್ಷಗಳೆರಡರಲ್ಲಿ ಇದ್ದವರ ಭಿನ್ನಾಭಿಪ್ರಾಯಗಳಿಂದ ಮೂರನೆಯವರಿಗೆ (ಬ್ರಾಹ್ಮಣರಿಗೆ) ಅನುಕೂಲಗಳು ಆಗುತ್ತಿದ್ದವು. ಇದು

ಎರಡೂ ಕಡೆಯವರಿಗೂ ಮನವರಿಕೆಗೆ ಬಾರದಿರಲಿಲ್ಲ. ಹೀಗಾಗಿ ಎರಡೂ ಸಂಘಟನೆಗಳು ಮತ್ತೆ ಒಂದುಗೂಡಿ ಪ್ರಜಾಸಂಯುಕ್ತ ಪಕ್ಷ (೧೯೩೪-೩೫) ಎಂಬ ಹೊಸ ಪಕ್ಷವನ್ನು ಕಟ್ಟಿದವು. ಇವೆಲ್ಲವನ್ನು ಮೈಸೂರಿನ ಏಕೀಕರಣವಾದಿಗಳ ನಿರ್ಧಾರ, ನಿಲುವುಗಳು ಅವಲಂಬಿತವಾಗಿದ್ದವು. ಒಂದು ರೀತಿಯ ಸಂಕೀರ್ಣತೆ ಇದ್ದುದರಿಂದ ನಿರ್ಣಯಗಳನ್ನು ತೆಗೆದುಕೊಳ್ಳದೆ ಕಾಯುವ ಸ್ಥಿತಿ ಬಂದೊದಗಿತ್ತು.

ಮೈಸೂರಿಗರು ಉತ್ತರ ಕರ್ನಾಟಕದಲ್ಲಿನ ಕಾಂಗ್ರೆಸಿನೊಂದಿಗೆ ಬೆರೆತಂತೆ (ಏಕೀಕರಣದ ವಿಚಾರದಲ್ಲಿ) ಮೈಸೂರಿನಲ್ಲಿ ಬೆರೆತಿರಲಿಲ್ಲ. ಇದಕ್ಕೆ ಇವರಲ್ಲಿದ್ದ ಮೈಸೂರಿನ ಮೇಲಿನ ವ್ಯಾಮೋಹವೇ ಕಾರಣ. ಹೀಗಾಗಿ ಏಕೀಕರಣಕ್ಕೆ ಮುಕ್ತ ಮನಸ್ಸಿನಿಂದ ಮುಂದೆ ಬರುತ್ತಿರಲಿಲ್ಲ. ಬದಲಾಗಿ ಮೈಸೂರಿನ ಆಂತರಿಕ ವಿಷಯಗಳಲ್ಲಿ ಮಗ್ನರಾಗಿದ್ದರು. ಅಂದರೆ ಬ್ರಾಹ್ಮಣ-ಬ್ರಾಹ್ಮಣೇತರ ಚಳವಳಿಗಳಲ್ಲಿ. ಇದರ ಪರಿಣಾಮವಾಗಿ ಜಾತೀಯತೆಯ ಮನಸ್ಸುಗಳು ಗಟ್ಟಿಗೊಳ್ಳತೊಡಗಿದವು. ಈ ಹಿನ್ನೆಲೆಯಲ್ಲಿಯೇ ಪ್ರಜಾಮಿತ್ರ ಮಂಡಳಿಯನ್ನು ಬ್ರಾಹ್ಮಣೇತರರು ತಮ್ಮ ಐಕ್ಯಕ ವೇದಿಕೆಯನ್ನಾಗಿಸಿಕೊಂಡಿದ್ದುದು. ಅಂತೆಯೇ ಬ್ರಾಹ್ಮಣ ರೆಲ್ಲರೂ ಕಾಂಗ್ರೆಸಿನಡಿಯಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದರು. ಬ್ರಾಹ್ಮಣೇತರರಿಗೆ ಎಸ್. ಚನ್ನಯ್ಯ, ಡಿ.ಎಸ್. ಮಲ್ಲಪ್ಪ, ಸಿ.ಆರ್. ರೆಡ್ಡಿ, ಗುಲಾಂ ಅಹ್ಮದ್ ಕಲಾಮಿ, ಮೂಗಯ್ಯ, ಜಫರ್, ಅಬ್ಬಾಸ್‌ಖಾನ್, ತಿಮ್ಮಯ್ಯ ಮೊದಲಾದವರು ನಾಯಕರಾಗಿದ್ದರು. ಬ್ರಾಹ್ಮಣರ ನಾಯಕತ್ವ ವಹಿಸಿಕೊಂಡಿದ್ದವರು ತಗಡೂರು ರಾಮಚಂದ್ರರಾವ್, ಮಾಣಿಕ್ಯ ಮೊದಲಿಯಾರ್, ಕೆ. ರಂಗ ಅಯ್ಯಂಗಾರ್, ಎಸ್. ಸತ್ಯಮೂರ್ತಿ, ತಿ.ತಾ. ಶರ್ಮ, ಸೆಟ್ಲೂರ್, ಡಿ.ವಿ. ಗುಂಡಪ್ಪ, ಎಂ. ವೆಂಕಟಕೃಷ್ಣಯ್ಯ ಮೊದಲಾದವರು. ಮೈಸೂರಿನಲ್ಲಿ ಒಂದು ರೀತಿಯ ತದ್ವಿರುದ್ಧ ಮನೋಚಿಂತನೆಗಳು ಬೆಳೆದುಕೊಂಡು ಏಕೀಕರಣದ ಬಗೆಗೆ ಗಾಢವಾಗಿ ಚಿಂತಿಸುವಂತೆ ಮಾಡಿರಲಿಲ್ಲ. ಬದಲಾಗಿ ಆ ತುರ್ತು ಇವರಿಗೆ ಇಲ್ಲವಾದದ್ದು. ಮೈಸೂರಿನಲ್ಲಿ ಮಹಾರಾಜರ ಆಳ್ವಿಕೆಯಿದ್ದ ಕಾರಣ ಬೇರೆ ಭಾಷಿಕರ (ಉತ್ತರದಲ್ಲಿದ್ದಂತೆ) ಒತ್ತಡಗಳು ಇಲ್ಲಿರಲಿಲ್ಲ. ಏನೇ ಆದರೂ ತದ್ವಿರುದ್ಧದ ಮನೋಚಿಂತನೆಗಳು ಬಹಳ ಕಾಲ ಮುಂದುವರೆಯಲಿಲ್ಲ. ವಿರುದ್ಧ ದಾರಿ ತುಳಿಯುವುದರಿಂದ ಪ್ರಾಂತೀಯ ಹಾಗೂ ರಾಷ್ಟ್ರೀಯ ಮಟ್ಟಗಳಲ್ಲಿ ಏನನ್ನೂ ಗಳಿಸಲು ಸಾಧ್ಯವಿಲ್ಲ ಎಂಬ ಅಂಶವನ್ನು ಬಹಳ ಬೇಗ ಎರಡೂ ಗುಂಪಿನವರು ಕಂಡುಕೊಂಡರು. ಬಹುಶಃ ಕಾಂಗ್ರೆಸ್ ಹಾಗೂ

ಪ್ರಜಾಸಂಯುಕ್ತ ಪಕ್ಷಗಳು ತಮ್ಮ ತಮ್ಮ ಹಿತಾಸಕ್ತಿಗಳಿಗೆ ಅನುಗುಣವಾಗಿ ಒಂದುಗೂಡಲು ಮಣಿಯಲೇ ಬೇಕಾದಂಥ ಅನಿವಾರ್ಯತೆಗಳೂ ಇದ್ದಿರಬಹುದು. ಉದಾಹರಣೆಗೆ, ಕಾಂಗ್ರೇಸಿಗೆ (ಬ್ರಾಹ್ಮಣರಿಗೆ) ಬಹು ಸಂಖ್ಯಾತರಿದ್ದ ಬ್ರಾಹ್ಮಣೇತರರನ್ನು (ಪ್ರಜಾ ಸಂಯುಕ್ತ ಪಕ್ಷದವರನ್ನು) ತಮ್ಮೊಡನೆ ಸೇರಿಸಿಕೊಳ್ಳದೆ ಯಾವುದೇ ರಾಜಕೀಯ ಹೋರಾಟವು ಗುರಿ ಮುಟ್ಟುವುದಿಲ್ಲ ಎಂಬುದು ಅರಿವಾಗಿತ್ತು. ಅದೇ ರೀತಿಯಲ್ಲಿ ಪ್ರಜಾ ಸಂಯುಕ್ತ ಪಕ್ಷದವರಿಗೆ ತಮ್ಮ ಧ್ಯೇಯವಾದ 'ಜವಾಬ್ದಾರಿ ಸರ್ಕಾರದ ಸ್ಥಾಪನೆ'ಗೆ ಕಾಂಗ್ರೇಸಿನ ಬೆಂಬಲ ಬೇಕೆ ಬೇಕಿತ್ತು. ಇವೆರಡೂ ಸಂಘಟನೆಗಳು ತಾತ್ವಿಕವಾಗಿ ಒಂದುಗೂಡಲು ಒಂದು ಚಾರಿತ್ರಿಕ ಸನ್ನಿವೇಶವೂ ಸಹಕರಿಸಿತ್ತು. ಅದೇ 'ನಿರಂಕುಶ ದಿವಾನ'ರನ್ನು (ಮಿರ್ಜಾ ಇಸ್ಮಾಯಿಲ್) ಗದ್ದುಗೆಯಿಂದ ಇಳಿಸುವ ಸಂದರ್ಭ. ಈ ವಿಚಾರದಲ್ಲಿ ಎರಡೂ ಕಡೆಯವರು ತೀರ ಹತ್ತಿರಕ್ಕೆ ಬಂದರು. ಹೀಗೆ ಹತ್ತಿರಕ್ಕೆ ಬಂದುದರ ಪರಿಣಾಮವೇ **ಮೈಸೂರು ಕಾಂಗ್ರೇಸ್**‌ನ ಹುಟ್ಟು.[೨೮] 'ಮೈಸೂರು ಕಾಂಗ್ರೇಸ್' ಎಂಬ ಹೊಸ ಪಕ್ಷವನ್ನು ಅಧಿಕೃತವಾಗಿ ೧೬.೧೦.೧೯೩೭ ರಂದು ಸ್ಥಾಪಿಸುವುದರ ಮೂಲಕ ಎಲ್ಲರೂ ಒಂದಾದರು. ಹಳೆಯ ಮೈಸೂರಿನಲ್ಲಿ ಆಗುತ್ತಿದ್ದ ಇಂಥ ಹಲವು ಪ್ರತಿಕ್ರಿಯೆಗಳಿಗೂ ಏಕೀಕರಣ ಚಳವಳಿಗೂ ಅಂತರಸಂಬಂಧಗಳಿವೆ. ಈ ಒಂದುಗೂಡುವಿಕೆಯ ತತ್‌ಕ್ಷಣದ ಪರಿಣಾಮವೇ **ಬೆಂಗಳೂರಿ** ನಲ್ಲಿ ಹುಟ್ಟಿಕೊಂಡ **ಏಕೀಕರಣ ಸಂಘ** (೧೯೩೮). ಮೈಸೂರಿಗರು ಒಂದುಗೂಡಿದ ಮೇಲೆ ಉತ್ತರದಲ್ಲಿದ್ದ ಏಕೀಕರಣದ ಅಲೆಗೆ ಪ್ರತಿಕ್ರಿಯಿಸಲೇಬೇಕಾದ ಅನಿವಾರ್ಯತೆ ಇತ್ತು. ಆದ್ದರಿಂದಲೇ ಹಳೆಯ ಮೈಸೂರಿನಲ್ಲಿ ಏಕೀಕರಣ ಚಳವಳಿಗಾಗಿ ಮೊಟ್ಟಮೊದಲಿಗೆ ಈ 'ಸಂಘ' ಹುಟ್ಟಿಕೊಂಡದ್ದು. ಅಷ್ಟೇ ಅಲ್ಲದೆ ಈ ಉದ್ದೇಶಕ್ಕೆ ಇದು ಕೊನೆಯ ಸಂಘಟನೆಯೂ ಹೌದು.

ಏಕೀಕರಣ ಸಂಘಕ್ಕೆ **ಬೆನಗಲ್ ರಾಮರಾಯರು** ಅಧ್ಯಕ್ಷರಾಗಿಯೂ, **ಬಿ. ಶಿವಮೂರ್ತಿ ಶಾಸ್ತ್ರಿ**ಗಳು ಕಾರ್ಯದರ್ಶಿಗಳಾಗಿಯೂ ಆಯ್ಕೆ ಆಗಿದ್ದರು. ಈ ಸಂಘವು ಹೆಚ್ಚಾಗಿ **ಗಡಿನಾಡಿನ** ಪ್ರದೇಶಗಳಲ್ಲಿ ತನ್ನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿತ್ತು. ಪರಿಣಾಮವಾಗಿ **ಮಡಕಶಿರ, ಹೊಸೂರು, ಕೊಳ್ಳೇಗಾಲ, ಕೆಲಮಂಗಲ, ನೀಲಗಿರಿ, ತಾಳವಾಡಿ, ಆಧೋನಿ** ಮೊದಲಾದ ಗಡಿ ಭಾಗಗಳ ಕನ್ನಡಿಗರು ಏಕೀಕರಣಕ್ಕಾಗಿ ಸ್ಪಂದಿಸುವಂತಾಯಿತು. ಆ ಸಂಘವು ಗಡಿ ಕನ್ನಡ ಪ್ರದೇಶಗಳನ್ನೇ ಆಯ್ಕೆ ಮಾಡಿ ಕೊಂಡಿದ್ದಕ್ಕೆ ಭಿನ್ನ ಬಗೆಯಲ್ಲೂ

ತರ್ಕಿಸಬಹುದು. ಅಂದು 'ಕನ್ನಡ ಸಾಹಿತ್ಯ ಪರಿಷತ್ತಿ'ನ ಕನ್ನಡ-ಕರ್ನಾಟಕ ಪರವಾದ ಚಟುವಟಿಕೆಗಳ ಬಗ್ಗೆ ಆಲೂರ ವೆಂಕಟರಾಯ ರನ್ನೊಳಗೊಂಡಂತೆ ಮುಂಬಯಿ ಕನ್ನಡಿಗರು ಅಸಮಾಧಾನ ವ್ಯಕ್ತಪಡಿಸಿದ್ದರು, ಮೈಸೂರು-ಬೆಂಗಳೂರಿಗರ ಮುಂದಾಳತ್ವದ ಧೋರಣೆಗಳನ್ನು ಒಪ್ಪದೆ ೧೯೩೮ ರಲ್ಲಿ ಆಲೂರರು ಪರಿಷತ್ತಿಗೆ ರಾಜೀನಾಮೆ ಕೊಟ್ಟದ್ದೂ ಉಂಟು. ಆಲೂರರು 'ಪರಿಷತ್ತ'ನ್ನು "ಗಡಿಕನ್ನಡಿಗರ ಸಮಸ್ಯೆಗಳಿಗೆ ಸ್ಪಂದಿಸದ ಸಂಸ್ಥೆ"ಯೆಂದು ಟೀಕಿಸಿದ್ದರು. ಬಹುಶಃ ಈ ಕೊರತೆಯನ್ನು ತುಂಬಲು ಹಾಗೂ ಆ ಉತ್ತರದ ಕಡೆಯವರೆಗೆ ಮೈಸೂರಿಗರ ಏಕೀಕರಣ ಕಾರ್ಯಕ್ರಮಗಳನ್ನು ಮನವರಿಕೆ ಮಾಡಿಕೊಡಲು ಈ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರಬೇಕು. ಇದರಿಂದ ಉತ್ತರದವರೊಂದಿಗೆ ಮೈಸೂರಿಗರು ಇನ್ನಷ್ಟು ನಿಕಟತೆಯನ್ನು ಹೊಂದಲು ಬಯಸಿರ ಬಹುದು ಎಂಬುದು ಸಹ ವ್ಯಕ್ತ ಆಗುತ್ತದೆ. ಆದರೂ ಹಳೆಯ ಮೈಸೂರಿನವರ ಬಗೆಗೆ ಮುಂಬಯಿ-ಕನ್ನಡಿಗರಿಗೆ ಅಂಥ ನಂಬಿಕೆಯೇನು ಬಂದಿರಲಿಲ್ಲ. ಇದಕ್ಕೆ ಸಾಕ್ಷಿಯೋ ಎಂಬಂತೆ ಒಂದು ಉದಾಹರಣೆ ಇದೆ. ಮೈಸೂರಿನ ಕನ್ನಡಿಗರು ಕಾಂಗ್ರೇಸಿನೊಂದಿಗೆ ಬೆರೆತ ಮೇಲೆ ೧೯೩೭ರಲ್ಲಿ ಭಾಷಾವಾರು ಪ್ರಾಂತ್ಯಗಳ ಬಗೆಗೆ ತೆಗೆದುಕೊಂಡ ನಿರ್ಣಯ ಸಮಯ ಸಾಧಕತನ ಎಂದು ಭಾವಿಸುವಂತೆ ಆಗಿತ್ತು. ಏಕೆಂದರೆ ಮೈಸೂರಿಗರು ಮತ್ತೆ ಆ ರೀತಿಯ ನಿರ್ಣಯವನ್ನು ತೆಗೆದುಕೊಂಡದ್ದು ಒಂಭತ್ತು ವರುಷಗಳ ತರುವಾಯ (೧೯೪೬ರಲ್ಲಿ). ಹೀಗಾಗಿ ಭಾವನಾತ್ಮಕ ಸಂಬಂಧಗಳ ಬಗ್ಗೆ ಗುಮಾನಿಗಳು ಹುಟ್ಟಿಕೊಂಡದ್ದು ಸಹಜ.

೧೯೩೮ ರಲ್ಲಿ ಮುಂಬಯಿ ಹಾಗೂ ಮದ್ರಾಸ್ ಶಾಸನ ಸಭೆಗಳಲ್ಲಿ ಏಕೀಕರಣದ ಗೊತ್ತುವಳಿ ಮಾನ್ಯ ಆಗಿತ್ತು. ಈ ಸನ್ನಿವೇಶದಲ್ಲಿಯೇ ರಾಷ್ಟ್ರೀಯ ನಾಯಕರನ್ನು ಕಂಡು ಏಕೀಕರಣಕ್ಕಾಗಿ ಒತ್ತಡ ತರುವ ಯೋಜನೆ ಹಾಕಲಾಯಿತು. ಅದರಂತೆ ಗಾಂಧಿ, ಸರ್ದಾರ್ ಪಟೇಲ್, ನೆಹರು, ಡಾ. ರಾಜೇಂದ್ರ ಪ್ರಸಾದ್, ಡಾ. ಟಂಡನ್ ಅವರುಗಳನ್ನು ಭೇಟಿಯಾಗಿ ಒತ್ತಾಯಿಸಿದ್ದೂ ಉಂಟು. ಅಷ್ಟರಲ್ಲಿ ಅಂತರಾಷ್ಟ್ರೀಯ ಮಟ್ಟದಲ್ಲಿ ಎರಡನೆಯ ಜಾಗತಿಕ ಯುದ್ಧ ಆರಂಭವಾಯಿತು (೧೯೩೯). ಇದರಿಂದ ಪ್ರಾಂತೀಯ ಹಾಗೂ ರಾಷ್ಟ್ರೀಯ ಮಟ್ಟಗಳಲ್ಲಿ ರಾಜಕೀಯವಾದ ಏರು-ಪೇರುಗಳು ಆದವು. ಎಲ್ಲ ಕಾಂಗ್ರೇಸ್ ಮಂತ್ರಿ ಮಂಡಲಗಳು ಯುದ್ಧವನ್ನು ಹಾಗೂ ಬ್ರಿಟಿಷರ ಧೋರಣೆಯನ್ನು ವಿರೋಧಿಸಿ ರಾಜಿನಾಮೆ ನೀಡಿದವು. ಈ ಸಂದರ್ಭದಲ್ಲಿ ರಾಷ್ಟ್ರೀಯ ಹೋರಾಟಗಾರರು

ಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸುತ್ತಿದ್ದರು. ಆದರೆ ಏಕೀಕರಣವಾದಿಗಳು ರಾಜಕಾರಣದ ನೆಲೆಯಲ್ಲಿ ಮೊದಲಿನಷ್ಟು ಬಿರುಸಾಗಿ ಚಳವಳಿಯನ್ನು ಮುನ್ನಡೆಸಲು ಆಗಲಿಲ್ಲ. ಬದಲಾಗಿ ಏಕೀಕರಣದ ಜಾಗೃತಿಯನ್ನು ಸಾಹಿತ್ಯಕ-ಸಾಂಸ್ಕೃತಿಕ ನೆಲೆಗಳಲ್ಲಿ ಕಾಯ್ದಿಟ್ಟುಕೊಳ್ಳುವ ಕಾರ್ಯಕ್ರಮಗಳನ್ನು ಹಾಕಿಕೊಂಡರು. ಈ ಸಂದರ್ಭದಲ್ಲಿ 'ಸಾಹಿತ್ಯ ಪರಿಷತ್ತು' ತನ್ನ ನಿಜವಾದ ಹೊಣೆಯನ್ನು ನಿಭಾಯಿಸಿತು ಎನ್ನಬಹುದು. ಏಕೆಂದರೆ ೧೯೪೦ರಲ್ಲಿ ಧಾರವಾಡದ ಸಾಹಿತ್ಯ ಸಮ್ಮೇಳನದಲ್ಲಿ ಅದು ತೆಗೆದುಕೊಂಡ ನಿರ್ಣಯ. ಈ ನಿರ್ಣಯ ಕನ್ನಡತಿಯರಿಂದ ಅಂಗೀಕೃತವಾಗಿದ್ದುರಿಂದ ಇನ್ನಷ್ಟು ಮಹತ್ವ ಬಂದಿತ್ತು. ಅಷ್ಟೇ ಅಲ್ಲದೆ ಪರಿಷತ್ತು ಏಕೀಕರಣದ ಬಗ್ಗೆ ತೆಗೆದುಕೊಂಡ ಮೊಟ್ಟಮೊದಲ ಹಾಗೂ ನೇರವಾದ ಠರಾವಾಗಿದೆ. ಸಮ್ಮೇಳನದ ಮಹಿಳಾ ಗೋಷ್ಠಿಯಲ್ಲಿ-

> ''ಹರಿದು ಹಂಚಿಹೋದ ಕರ್ನಾಟಕದ ಭಾಗಗಳನ್ನೆಲ್ಲಾ ಒಂದುಗೂಡಿಸಿ ಒಂದು ಮಾಡಬೇಕೆಂದು ಸರಕಾರಕ್ಕೆ ಒತ್ತಾಯಪಡಿಸಬೇಕೆಂದೂ, ಕನ್ನಡ ನಾಡು ಒಂದಾದ ಹೊರತು ಕನ್ನಡತಿಯರಿಗೆ ಸಮಾಧಾನವಾಗದೆಂದು ಈ ಗೋಷ್ಠಿ ನಿರ್ಣಯಿಸುತ್ತದೆ.''[೯]

- ಎಂದು ತೆಗೆದುಕೊಂಡ ಈ ನಿರ್ಣಯವು ಏಕೀಕರಣದ ಬಗೆಗೆ ತಮಗಿರುವ ತುರ್ತನ್ನು, ಕಾಳಜಿಯನ್ನು ಹೇಳುತ್ತದೆ. ಈ ಸಂದರ್ಭದಲ್ಲಿ ಏಕೀಕರಣಕ್ಕಾಗಿ ಸಾಹಿತಿಗಳು, ಬರೆಹಗಾರರು, ಕಲಾವಿದರು, ಪತ್ರಕರ್ತರು ತಮ್ಮದೇ ಆದ ಪ್ರಕಾರಗಳ ಮೂಲಕ ಕನ್ನಡಿಗರನ್ನು ಪ್ರತಿಸ್ಪಂದಿಸಿದರು. ಅಂದು ಬೇಂದ್ರೆ, ಕು.ವೆಂ.ಪು, ಶಂಬಾ, ಬೆಟಗೇರಿ, ಶ್ರೀರಂಗ, ಗೋಕಾಕ್, ಬಿ.ಎಂ.ಶ್ರೀ, ಅ.ನ.ಕೃ, ಕಪಟರಾಳ ಕೃಷ್ಣರಾವ್, ಗೊರೂರು, ಶಿವಮೂರ್ತಿಶಾಸ್ತ್ರಿ, ತಿ.ತಾ.ಶರ್ಮ, ತಾರನಾಥ ಮೊದಲಾದವರುಗಳ ಸಾಹಿತ್ಯ ಸೃಷ್ಟಿ ಏಕೀಕರಣಕ್ಕಾಗಿ ಬೌದ್ಧಿಕ ಹಾಗೂ ಭಾವನಾತ್ಮಕ ಪ್ರೇರಣೆ ನೀಡುತ್ತಿತ್ತು.

'ಸತ್ಯಾಗ್ರಹ ಚಳವಳಿ'ಯು ೧೯೪೧ ರ ವೇಳೆಗೆ ರಾಷ್ಟ್ರೀಯ ಮಟ್ಟದಲ್ಲಿ ತೀವ್ರತೆಯನ್ನು ಪಡೆಯುತ್ತಿತ್ತು. ಇದರ ಮುಂದಿನ ಘಟ್ಟವೇ ೧೯೪೨ ರ 'ಚಲೇಜಾವ್' (ಭಾರತ ಬಿಟ್ಟು ತೊಲಗಿ) ಚಳವಳಿ. ಬ್ರಿಟಿಷರನ್ನು ಇಂಡಿಯಾದಿಂದ ಹೊರದೂಡುವ ಆಶಯವನ್ನು ಹೊತ್ತಿದ್ದ ಈ ಚಳವಳಿಗೆ ನಾಯಕರಿಲ್ಲದಂತೆ ಮಾಡುವುದು ಆಡಳಿತಶಾಹಿಯ ನಿಲುವು. ಇದರ ಪರಿಣಾಮದಿಂದ ನಿರ್ಣಯ ತೆಗೆದುಕೊಳ್ಳುವ ಅಧಿಕಾರ ಜನರ ಕೈ ತಲುಪಿ ಅನೇಕ ಹಿಂಸಾಕೃತ್ಯಗಳು ಜರುಗತೊಡಗಿದವು. ಕನ್ನಡದ ಭೂ ಪ್ರದೇಶಗಳಿಗೂ ಈ ಮಾತು

ಅನ್ವಯಿಸುತ್ತದೆ. ಕನ್ನಡಿಗರಿಗೆ ಈ ಸಂದರ್ಭದಲ್ಲಿ ಏಕೀಕರಣವಷ್ಟೆ 'ಸ್ವರಾಜ್ಯ'ದ ಜರೂರು ಇತ್ತು. ಅಲ್ಲದೆ ಕಾಂಗ್ರೆಸ್ಸಿನಲ್ಲಿದ್ದ ಏಕೀಕರಣವಾದಿಗಳು (ದಿವಾಕರ ಮೊದಲಾದವರು) ಕ್ವಿಟ್ ಇಂಡಿಯಾ ಚಳವಳಿಯಲ್ಲೂ ಸಮನಾದ ಒಲವು, ಪಾತ್ರವನ್ನು ವಹಿಸಬೇಕಾಗಿದ್ದ ಅನಿವಾರ್ಯತೆಗಳಿದ್ದವು. ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣದ ಚಳವಳಿಗಳ ಹಾದಿಗಳು ಭಿನ್ನವಾಗಿದ್ದರೂ ಅಂತಿಮ ಗುರಿ ಒಂದೇ ಆಗಿತ್ತು. ಅಂದರೆ ವಸಾಹತುಶಕ್ತಿಯಿಂದ ಇಂಡಿಯಾವನ್ನು ವಿಮುಕ್ತಿಗೊಳಿಸುವುದರ ಮೂಲಕ ಕರ್ನಾಟಕದ ಏಕೀಕರಣವು ಸಾಕಾರವಾಗುತ್ತದೆ ಎಂಬುದು ಕನ್ನಡಿಗರ ಅಂತರ್ಗತ ಧೋರಣೆ. ೧೯೪೨ ರ 'ಕ್ವಿಟ್ ಇಂಡಿಯಾ'ದ ಚಳವಳಿಯ ಸಂದರ್ಭದಲ್ಲಿ ಏಕೀಕರಣದ ಹಾದಿ ತಿರುವು ಪಡೆದುಕೊಳ್ಳದೆ ಇರಲಿಲ್ಲ. ಏಕೆಂದರೆ ಜನರೇ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿದ್ದುದರಿಂದ ಈ ಹಿನ್ನೆಲೆಯಲ್ಲಿ ಶಿವಮೊಗ್ಗೆಯ ಈಸೂರಿನ ಘಟನೆ ಮುಖ್ಯವಾದದ್ದು. ಇಲ್ಲಿ ಸರಕಾರದ ವಿರುದ್ಧ ದಂಗೆ ಎದ್ದ ಜನ ಇಬ್ಬರು ಅಧಿಕಾರಿಗಳನ್ನು ಕೊಂದಿದ್ದರು. ಆಗ ಪೊಲೀಸ್ ಶಸ್ತ್ರಾಸ್ತ್ರ ಪಡೆ ಗ್ರಾಮಕ್ಕೆ ನುಗ್ಗಿ ಅತ್ಯಾಚಾರಗಳನ್ನು ಎಸಗಿತು. ಅಲ್ಲದೆ ಗುರಪ್ಪ, ಮಲ್ಲಪ್ಪ, ಸೂರ್ಯ ನಾರಾಯಣಚಾರಿ, ಹಾಲಪ್ಪ, ಶಂಕರಪ್ಪ ಅವರುಗಳನ್ನು ಗಲ್ಲಿಗೂ ಏರಿಸಿತ್ತು. ಉತ್ತರ ಕರ್ನಾಟಕದಲ್ಲೂ ಇದೇ ರೀತಿಯ ವಿಧ್ವಂಸಕ ಕೃತ್ಯಗಳು ನಡೆಯತೊಡಗಿದವು. ಇದರಿಂದ ಮೈಲಾರ ಮಹಾದೇವಪ್ಪ (ಮಾರ್ತಾಂಡ), ತಿರುಕಪ್ಪ, ಗೋಗನೂರು, ವೀರಯ್ಯ ಹಿರೇಮಠ ಅವರುಗಳು ಪೊಲೀಸರ ಗುಂಡಿಗೆ ಬಲಿಯಾದರು. ಬೆಳಗಾವಿಯಲ್ಲಿ ವಾಲಿಚನ್ನಪ್ಪನವರು ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದ್ದರು.[೪೦] ರಾಷ್ಟ್ರೀಯ ಚಳವಳಿ ತೀವ್ರತೆಯನ್ನು ಪಡೆಯುತ್ತಿತ್ತು. ಇಂಥ ತೀವ್ರತೆಗಳಿಂದ ಏಕೀಕರಣ ಚಳವಳಿಯ ಹಾಗೂ ಚಳವಳಿಗಾರರ ಮೇಲೆ ಪರಿಣಾಮಗಳು ಆಗದೆ ಇರಲಿಲ್ಲ. ಅಂದರೆ ಏಕೀಕರಣ ಮೊದಲೋ ಅಥವಾ ಸ್ವಾತಂತ್ರ್ಯ ಮೊದಲೊ ಎಂಬ ಅನುಮಾನಗಳು ಉಂಟಾದವು. ಈ ಮೊದಲೇ ತಿಳಿಸಿದಂತೆ ಅವೆರಡೂ ಒಂದೇ (ದಾಸ್ಯದ ವಿಚಾರವಲ್ಲಿ) ಎಂಬುದು ಇಲ್ಲಿ ಮುಖ್ಯವಾದುದು. ಇಂಡಿಯಾದ ಸ್ಥಿತಿಗತಿಗಳಿಗೆ ಬೇಕಾದ ನೋಟವೇ ಕರ್ನಾಟಕಕ್ಕೂ ಬೇಕಾಗುತ್ತಿತ್ತು. ಆದರೆ ಭಾಷಿಕ ನೆಲೆಯಲ್ಲಿ ಈ ಐಕ್ಯತೆಯ ನೋಟ ಸಾಧ್ಯವಿರಲಿಲ್ಲ. ಬದಲಾಗಿ ಭಿನ್ನತೆಗಳು ಕಾಣಿಸಿಕೊಳ್ಳುತ್ತವೆ. ಅಂದರೆ ಕನ್ನಡ ಪ್ರದೇಶಗಳ ಮೇಲೆ ಭಿನ್ನ ಭಾಷಿಕರ ಆಕ್ರಮಣದ ಪ್ರಶ್ನೆ ಬಂದಾಗ ಅದೇ ರೀತಿ ಇತರೆ ಭಾಷಿಕರು ಸಹ. ಆಯಾ ಭಾಷಿಕರು ಅವರವರ ಪರಧಿಗಳಲ್ಲಿಯ ಚಿಂತನೆ, ಚಟುವಟಿಕೆಗಳನ್ನು ಮಾಡುವುದು ಅನುಕೂಲತೆಗಳಿಂದ ಕೂಡಿತ್ತು. ಆದರೆ ವಾಸ್ತವ ಸ್ಥಿತಿಗತಿಗಳು ಆಕ್ರಮಣಕಾರಿ

ಆಗಿರುತ್ತಿದ್ದವು. ಉದಾಹರಣೆಗೆ ೧೯೪೩ ರಲ್ಲಾದ 'ಆಂಧ್ರ ಮಹಾಸಭೆ'ಯ ಘಟನೆ. ತೆಲುಗರು ಈ ಸಭೆಯನ್ನು ಬಳ್ಳಾರಿಯಲ್ಲಿ (ಕನ್ನಡ ನೆಲದಲ್ಲಿ) ನೆರೆಯಿಸಬೇಕೆಂದು ನಿರ್ಧರಿಸಿದ್ದು. ಈ ಯೋಜನೆಯ ಹಿಂದೆ ಬಳ್ಳಾರಿ ತಾಲ್ಲೂಕು ಹಾಗೂ ಅದರ ಪೂರ್ವ ಭಾಗಗಳನ್ನು ಆಂಧ್ರಕ್ಕೆ ಸೇರಿಸಿಕೊಳ್ಳುವ ಕುತಂತ್ರ ಅಡಗಿತ್ತು.[೪೧] ಈ ಹುನ್ನಾರಗಳು ಕನ್ನಡಿಗರಿಗೆ ತಿಳಿಯದಿರಲಿಲ್ಲ. ಸುಮಾರು ಐದು ಸಾವಿರಕ್ಕೂ ಹೆಚ್ಚು ಯುವಕರು ಇದನ್ನು ಮೆರವಣಿಗೆ, ಕಪ್ಪುಬಾವುಟ ಪ್ರದರ್ಶನ, ಸತ್ಯಾಗ್ರಹ ಇನ್ನಿತರ ಕಾರ್ಯಕ್ರಮಗಳಿಂದ 'ಆಂಧ್ರ ಮಹಾಸಭೆ'ಯನ್ನು ಯಶಸ್ವಿಯಾಗದಂತೆ ಮಾಡಿದರು. ೧೯೪೪ ರ ಜೂನ್ ವೇಳೆಗೆ (೧೯೪೨ ರಿಂದಲೂ ಇದ್ದ) ಸಭೆ-ಸಮಾರಂಭಗಳ ಮೇಲಿನ ನಿಷೇಧವನ್ನು ಸರಕಾರ ಹಿಂತೆಗೆದುಕೊಂಡಿತು. ಹೀಗಾಗಿ ೧೯೪೫ ರಲ್ಲಿ ಮತ್ತೆ ಏಕೀಕರಣ ಚಳವಳಿಯು ಸಭೆ-ಸಮಾರಂಭ ಇನ್ನಿತರೆ ಕಾರ್ಯಕ್ರಮಗಳ ಮೂಲಕ ಚಾಲ್ತಿಗೆ ಬಂದಿತು. ಅದೂ ಅಲ್ಲದೆ ಈ ವೇಳೆಗಾಗಲೇ ಎರಡನೆಯ ಜಾಗತಿಕ ಯುದ್ಧವು ಕೊನೆಗೊಂಡು ಇಂಡಿಯಾದ ರಾಷ್ಟ್ರೀಯ ಚಳವಳಿ ಎಂದಿನ ಕಾವನ್ನು ಕಾಯ್ದಿರಿಸಿಕೊಂಡು ಮುನ್ನಡೆದಿತ್ತು.

೧೯೪೬ ರಿಂದ ಕರ್ನಾಟಕದ ಏಕೀಕರಣ ಚಳವಳಿಯಲ್ಲಿ ಅನೇಕ ಪಲ್ಲಟಗಳು ಕಾಣಿಸಿಕೊಂಡವು. ಏಕೆಂದರೆ ಈ ವೇಳೆಗಾಗಲೇ ಬ್ರಿಟಿಷರಿಗೆ ತಮ್ಮ ಪೆರಳೆಣಿಕೆಯ ದಿನಗಳು ಹತ್ತಿರವಾಗುತ್ತಿರುವುದರ ಬಗ್ಗೆ ಅರಿವು ಬಂದಿತ್ತು. ಇದರ ಜೊತೆಗೆ ಬಹುತೇಕ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಪಕ್ಷ ಬಹುಮತ ಪಡೆದು 'ತಾತ್ಕಾಲಿಕ ಸರ್ಕಾರ'ಗಳನ್ನು ರಚಿಸಿಕೊಂಡಿತ್ತು. ಇದರಿಂದ ಭವಿಷ್ಯದಲ್ಲಿ ಕಾಂಗ್ರೆಸ್ ಇಂಡಿಯಾವನ್ನು ಆಳುತ್ತದೆ ಎಂಬುದರಲ್ಲಿ ಸ್ವಲ್ಪವೂ ಅನುಮಾನವಿರಲಿಲ್ಲ. ಹೀಗಾಗಿ ಏಕೀಕರಣದ ಚಿಂತಕರಲ್ಲಿ, ಚಳವಳಿಗಾರರಲ್ಲಿ ಉತ್ಸುಕತೆಗಳು ಕಾಣಿಸಿಕೊಂಡವು. 'ಬ್ರಿಟಿಷ್ ಕರ್ನಾಟಕ'ದವರ ತೀವ್ರತೆ ಯನ್ನು ಕಂಡ ಇತರೆ 'ಸಂಸ್ಥಾನಿ ಪ್ರಜೆಗಳು' ತಾವು ಸಹ ಆದಷ್ಟು ಬೇಗ ಒಂದುಗೂಡುವ ಇಂಗಿತವನ್ನು ವ್ಯಕ್ತಪಡಿಸಲಾರಂಭಿಸಿದರು. ರಬಕವಿ, ಬನಹಟ್ಟಿ, ಜಮಖಂಡಿ, ಮುಧೋಳ, ಸಂಡೂರು ಮೊದಲಾದ ಸಂಸ್ಥಾನಗಳಲ್ಲಿ ಏಕೀಕರಣದ ಜಾಗೃತಿ ಮೂಡಿಸುವ ಕಾರ್ಯಕ್ರಮ ಗಳನ್ನು ಹಮ್ಮಿಕೊಳ್ಳಲಾಯಿತು. ಸೊಲ್ಲಾಪುರದ ಜಿಲ್ಲಾ ಕಚೇರಿಯಲ್ಲಿ 'ಇನ್ನು ಮುಂದೆ ಕನ್ನಡವೇ ಆಡಳಿತ ಭಾಷೆ ಆಗಬೇಕು' ಎಂದು ಒಂದು ಶಿಷ್ಟ ಮಂಡಲವನ್ನೇ ರೂಪಿಸಿದರು. ಜೊತೆಗೆ ಕನ್ನಡ ಭಾಷೆ ಮತ್ತು ಕರ್ನಾಟಕ ಪ್ರದೇಶಕ್ಕಾಗಿ ಪ್ರತ್ಯೇಕ ಬಾನುಲಿ ಕೇಂದ್ರವನ್ನು ಬಯಸಿ ದೆಹಲಿ ಮತ್ತು ಮುಂಬಯಿ ಸರ್ಕಾರಗಳ ಮೇಲೆ ಒತ್ತಡ ತರಲಾಯಿತು.

**ಮುಂಬಯಿಯಲ್ಲಿ** ೧೦ನೆಯ ಏಕೀಕರಣ ಸಮ್ಮೇಳನವು ೧೯೪೬ ರ ಜನವರಿಯಲ್ಲಿ ನಡೆಯಿತು. ಇದಕ್ಕೆ ಅಂದಿನ ಮುಖ್ಯಮಂತ್ರಿಗಳಾಗಿದ್ದ ಬಿ.ಜಿ. ಖೇರ್ ಅವರೆ ಅಧ್ಯಕ್ಷರು. ಸಮ್ಮೇಳನದ ಉದ್ಘಾಟನೆಗೆ ಬಂದಿದ್ದವರು **ಸರ್ದಾರ್ ವಲ್ಲಭಬಾಯಿ ಪಟೇಲ್**. ಇವರು ತಮ್ಮ ಭಾಷಣದಲ್ಲಿ -

> "........ Its (Karnataka's) art, literature and culture have contributed largely to the cultural wealth of India. Today, the Kannada speaking people are one in language and culture. They have been struggling to achieve administrative unity since 1907. But you know the ways of the foreign rulers...." ೪೨

- ಎಂದು ಮಾತನಾಡಿ, ವಸಾಹತು ಸಂದರ್ಭದ ತಮ್ಮ ಅಸಾಮರ್ಥ್ಯತೆಯ ಪರಿಮಿತಿಗಳನ್ನು ವಿವರಿಸಿದರು. ಅವರು ಭಾರತವು ಸ್ವಾತಂತ್ರ್ಯವಾದ ಕೂಡಲೆ ಕರ್ನಾಟಕ ರಾಜ್ಯ ನಿರ್ಮಾಣ, ವಿಶ್ವವಿದ್ಯಾಲಯದ ಸ್ಥಾಪನೆ ಇನ್ನಿತರೆ ಅಧಿಕಾರಗಳು ಲಭಿಸಲಿವೆ ಎಂದು ಭರವಸೆ ಕೊಟ್ಟರು. ಈ ಸಮ್ಮೇಳನ ಮುಂಬಯಿಯಲ್ಲಿ ನಡೆದ ಕಾರಣ ಬೇರೆ ಭಾಷಿಕರಿಗೂ ಕನ್ನಡಿಗರ ಸಮಸ್ಯೆ ಅರಿವಿಗೆ ಬಂದಿತು. ಈ ಸಂದರ್ಭದಲ್ಲಿ **ದಿನಕರ ದೇಸಾಯಿ** ಅವರು ಇಂಗ್ಲೆಂಡಿನಲ್ಲಿ ಇದ್ದರು. ಹೀಗಾಗಿ ಅವರು ಅಲ್ಲಿಯ **ಸರ್ ಸ್ಟಾಫೋರ್ಡ್ ಕ್ರಿಪ್ಸ್**‌ರನ್ನು ಭೇಟಿ ಮಾಡಿ ಕನ್ನಡಿಗರ ಸಮಸ್ಯೆಯನ್ನು ಬಗೆಹರಿಸಲು ಮನವಿ ಮಾಡಿಕೊಂಡರು.

ಏಕೀಕರಣದ ಚರಿತ್ರೆಯಲ್ಲಿ ೧೯೪೬ರ ಆಗಸ್ಟ್‌ನಲ್ಲಿ ನಡೆದ **ಅಖಿಲ ಕರ್ನಾಟಕ ಮಹಾಧಿವೇಶನ** ಬಹಳ ಮಹತ್ವದ್ದು. ಏಕೆಂದರೆ ಇದಕ್ಕೆ ಮೊದಲು ನಡೆದ ಅಧಿವೇಶನಗಳೆಲ್ಲವೂ ಮೈಸೂರು ಸಂಸ್ಥಾನದ ಹೊರಗೆ ನಡೆದದ್ದು. ಇದು ಹಳೆಯ ಮೈಸೂರಿನ **ದಾವಣಗೆರೆಯಲ್ಲಿ** ನಡೆದ ಮೊಟ್ಟಮೊದಲ ಏಕೀಕರಣದ ಮಹಾಧಿವೇಶನವೂ ಹೌದು. ಅಂತೆಯೇ ಕೊನೆಯದೂ ಹೌದು. ಈ 'ಕರ್ನಾಟಕಸ್ಥರ ಮಹಾಸಭೆ'ಗೆ ಕರ್ನಾಟಕ ಏಕೀಕರಣ ಸಂಘ ಹಾಗೂ ಕೆ.ಪಿ.ಸಿ.ಸಿ.ಗಳೆರಡೂ ಕಾರಣ. ಈ ಹಿಂದೆ ಭಾಗವಹಿಸದೇ ಇದ್ದಷ್ಟು ಕನ್ನಡಿಗರು ಇಲ್ಲಿ ನೆರೆದಿದ್ದುದ್ದು ಮುಖ್ಯವಾದ ಸಂಗತಿ.

ಅಂದರೆ ಇಲ್ಲಿಗೆ ಮುಂಬಯಿ, ಮದ್ರಾಸ್, ಕೊಡಗು, ಮೈಸೂರು ಶಾಸನ ಮಂಡಲಿಗಳ ಸದಸ್ಯರು, ಸಣ್ಣಪುಟ್ಟ ದೇಶೀ ಸಂಸ್ಥಾನಿ ಪ್ರಭುಗಳು ಹಾಗೂ ಪ್ರಜೆಗಳು, ವಿವಿಧ ರಾಜಕೀಯ ಪಕ್ಷಗಳ, ಜಾತೀಯ ಸಂಘಟನೆಗಳ ಪ್ರತಿನಿಧಿಗಳು, ಸ್ಥಳೀಯ ಪೌರಾಡಳಿತ ಸಂಸ್ಥೆಗಳ ಸದಸ್ಯರು, ಸಾಹಿತ್ಯ ಹಾಗೂ ಸಾಂಸ್ಕೃತಿಕ ಸಂಘಟನೆಗಳು, ಪ್ರತಿನಿಧಿಗಳು ಮೊದಲಾದವರು ಹೆಚ್ಚಿನ ಸಂಖ್ಯೆಯಲ್ಲಿ ಬಂದಿದ್ದರು. ಎಲ್ಲಕ್ಕಿಂತ ಮಿಗಿಲಾಗಿ ಹೆಚ್ಚಿನ ಸಂಖ್ಯೆಯಲ್ಲಿದ್ದ ಜನರಿಂದ ಈ ಮಹಾಧಿವೇಶನ ಅರ್ಥಪೂರ್ಣವೂ, ಪ್ರಾತಿನಿಧಿಕವೂ ಆಯಿತು.[೪೨] ಎಂ.ಪಿ. ಪಾಟೀಲರು ಅಧ್ಯಕ್ಷರಾಗಿದ್ದ ಈ ಅಧಿವೇಶನ ಅಷ್ಟು ಪ್ರಾತಿನಿಧಿಕವಾಗಲು ಕಾರಣಗಳು ಇಲ್ಲದಿಲ್ಲ. ಮೈಸೂರು ಸಂಸ್ಥಾನದ ಅನೇಕ ಏಕೀಕರಣವಾದಿಗಳು ತಮ್ಮ ಭಾಗದಲ್ಲಿ ಏಕೀಕರಣದ ಸಮ್ಮೇಳನ ನಡೆದೇ ಇಲ್ಲವೆಂಬ ಅವ್ಯಕ್ತ ಅಸಮಾಧಾನ ತೋರ್ಪಡಿಸಿದ್ದು ಮಾತ್ರ ನೆಪಮಾತ್ರದ ಕಾರಣ ಆಗಿತ್ತು. ಆದರೆ ಇದರಲ್ಲಿ ನಿಜಾಂಶವಿಲ್ಲದಿರಲಿಲ್ಲ. ಆದ್ದರಿಂದಲೇ ಉತ್ತರ ಕರ್ನಾಟಕದವರು (ಮುಂಬಯಿ ಕನ್ನಡಿಗರು) ದಕ್ಷಿಣದಲ್ಲಿ ಈ ಅಧಿವೇಶನವನ್ನು ನಡೆಸಲು ತೀರ್ಮಾನಿಸಿದ್ದು. ಈ ಅಧಿವೇಶನದಲ್ಲೂ ಮೈಸೂರಿಗರ ಸ್ವಾರ್ಥತೆ ಕೆಲಸ ಮಾಡಿತ್ತು. ಅಂದರೆ ಉತ್ತರದ ಏಕೀಕರಣವಾದಿಗಳನ್ನು ಇಲ್ಲಿ ಸೇರಿಸುವುದರ ಮೂಲಕ ತಮ್ಮ 'ಜವಾಬ್ದಾರಿ ಸರ್ಕಾರದ ಸ್ಥಾಪನೆ'ಗೆ ಹೆಚ್ಚಿನ ಬಲ ಬರುತ್ತದೆ ಎಂಬ ನಿಟ್ಟಿನಲ್ಲಿ ಆಲೋಚಿಸಿದ್ದರು.[೪೪] ಅದೇ ರೀತಿಯಲ್ಲಿ ಉತ್ತರ ಕರ್ನಾಟಕದ ಕನ್ನಡಿಗರಿಗೆ ಮೈಸೂರಿಗರನ್ನು ಏಕೀಕರಣಕ್ಕಾಗಿ ಜೊತೆಗೂಡಿಸಿಕೊಂಡು ಮುಂದುವರೆಯುವ ಅನಿವಾರ್ಯತೆಯೂ ಇತ್ತು. ಆ ಮೂಲಕ ಸಣ್ಣ-ಪುಟ್ಟ ಸಂಸ್ಥಾನಿ ಪ್ರದೇಶಗಳನ್ನು ಏಕೀಕರಣಕ್ಕೆ ಸಜ್ಜುಗೊಳಿಸುವ ಆಶಯ ಇವರದು. ಏಕೆಂದರೆ ಕೆಲವು ಸಂಸ್ಥಾನಗಳಲ್ಲಿ ಪ್ರಜೆಗಳು ಏಕೀಕರಣವನ್ನು ಬಯಸಿದರೂ ಸಂಸ್ಥಾನಿ ಪ್ರಭುಗಳು ಇನ್ನು ಮನಸ್ಸು ಮಾಡಿರಲಿಲ್ಲ. ಆದರೆ ಸಂಡೂರು ಸಂಸ್ಥಾನದ ಪ್ರಭುಗಳು ಈ ಮಾತಿಗೆ ಅಪವಾದ. ಅವರು ತಾವೇ ಮುಂದೆ ಬಂದು -

> "…..ಭಾಷಾವಾರು ಪ್ರಾಂತ ರಚನೆಯ ಕಡೆ ನಮ್ಮ ಪಕ್ಷಪಾತವಿದೆ, ಅದರಲ್ಲಿಯೂ ಕರ್ನಾಟಕ ಪ್ರಾಂತ ರಚನೆಯ ಕಡೆ ಮುಖ್ಯವಾಗಿ ನಮ್ಮ ಮನಸ್ಸು ಎಳೆಯುತ್ತಿದೆ."[೪೫]

- ಎಂಬ ತಮ್ಮ ಮನಸ್ಸಿನ ಇಂಗಿತವನ್ನು ವ್ಯಕ್ತಪಡಿಸಿದ್ದು ಉಂಟು. ಆದರೆ ಎಲ್ಲರೂ ಹಾಗೆ ಮುಂದೆ ಬರುತ್ತಿರಲಿಲ್ಲ. ಇದರಿಂದ ಅನೇಕ ಭಾರಿ, ಕರ್ನಾಟಕಕ್ಕೆ ಒಂದು

'ಸಂಯುಕ್ತ ಸರ್ಕಾರ'ದ (ಫೆಡರಲ್ ಮಾದರಿಯ) ರಚನೆ ಬೇಕಾಗಬಹುದು ಎಂಬ ಚಿಂತನೆಗಳು, ಅನುಮಾನಗಳು ಕಾಡಿದ್ದವು. ಅಷ್ಟೇ ಅಲ್ಲದೆ ಸಂಸ್ಥಾನಿ ಪ್ರಭುಗಳನ್ನು ಒಲಿಸಿಕೊಂಡು ಸದ್ಯದಲ್ಲಿಯೇ ನಡೆಯಲಿದ್ದ 'ಸಂವಿಧಾನ ರಚನಾ ಸಮಿತಿ'ಗೆ ಕನ್ನಡಿಗರ ಒಂದು ಗೂಡುವಿಕೆಯ ಉತ್ಸುಕತೆಯನ್ನು ತೋರಿಸಬೇಕಾದ ಅನಿವಾರ್ಯತೆ ನಿರ್ಮಾಣ ಆಗಿತ್ತು. ಈ ರೀತಿಯ ಅನಿವಾರ್ಯತೆಗಳು, ಕಾರಣಗಳು, ಒತ್ತಡಗಳು ಏನೇ ಇದ್ದರೂ ಅಷ್ಟು ಪ್ರಾತಿನಿಧಿಕವಾಗಿದ್ದ ಈ ಅಧಿವೇಶನದಲ್ಲಿ ತೆಗೆದುಕೊಳ್ಳಲಾದ ನಿರ್ಣಯಗಳು ಮುಖ್ಯ ವಾದವು. ಏಕೆಂದರೆ ಈ ನಿರ್ಣಯಗಳಿಗೆ ಭಿನ್ನವಾದ ರೀತಿಯಲ್ಲಿ ಪ್ರತಿಕ್ರಿಯೆಗಳನ್ನು ಎದುರಿಸಬೇಕಾಯಿತು.

ದಾವಣಗೆರೆಯ ಮಹಾಧಿವೇಶನದಲ್ಲಿ ದೇಶಿ ಸಂಸ್ಥಾನಿ ಪ್ರದೇಶಗಳಿಗೆ ಸಂಬಂಧಪಟ್ಟ ನಿರ್ಣಯವೊಂದು ಅಂಗೀಕೃತ ಆಯಿತು. ಇದು ಅಖಂಡ ಕರ್ನಾಟಕ ಸ್ಥಾಪನೆಯ ಹಿತ ದೃಷ್ಟಿಯಿಂದ ಹಾಗೂ 'ಬ್ರಿಟಿಷ್-ಕರ್ನಾಟಕ' 'ಸಂಸ್ಥಾನಿ-ಕರ್ನಾಟಕ' ಎಂಬ ಭಿನ್ನತೆಗಳನ್ನು ಅಳಿಸಿಹಾಕುವುದರ ಹಿನ್ನೆಲೆಯಲ್ಲಿ ತೆಗೆದುಕೊಳ್ಳಲಾದ ನಿರ್ಣಯ. ಈ ನಿರ್ಣಯದ ಪ್ರಕಾರ ಎರಡು ರೀತಿಯ ನಿಲುವುಗಳು ಹೊರಹೊಮ್ಮಿದವು. ಒಂದು, ಮೊದಲು **ಬ್ರಿಟಿಷ್ ಕರ್ನಾಟಕ** (ಮುಂಬಯಿ, ಮದ್ರಾಸ್, ಕೊಡಗು)ವನ್ನು ಒಂದುಗೂಡಿಸುವುದು. ಇನ್ನೊಂದು **ಸಂಸ್ಥಾನಿ ಕರ್ನಾಟಕ** (ಮೈಸೂರು, ಸಾಂಗ್ಲಿ, ಜಮಖಂಡಿ, ಸೊಂಡೂರು ಇತ್ಯಾದಿ)ಗಳವರು ತಮ್ಮ ತಮ್ಮ ಜವಾಬ್ದಾರಿ ಸರ್ಕಾರಗಳನ್ನು ಸ್ಥಾಪಿಸಿಕೊಂಡ ಅನಂತರ ಅವುಗಳನ್ನು ಬ್ರಿಟಿಷ್ ಕರ್ನಾಟಕಕ್ಕೆ ಸೇರಿಸಿಕೊಳ್ಳುವುದು. ಇದರಿಂದ ಸಹಜವಾಗಿ ಸಂಸ್ಥಾನಿ ಕನ್ನಡಿಗರಿಗೆ ಅಸಮಾಧಾನ ಉಂಟಾಯಿತು. ಅದರಲ್ಲೂ ಮುಖ್ಯವಾಗಿ ಮೈಸೂರಿನ ಸಂಸ್ಥಾನಿಕರಿಗೆ. ಏಕೆಂದರೆ ಇವರುಗಳು ಈ ಅಧಿವೇಶನಕ್ಕೆ ನೆರೆದಿದ್ದುದೇ ಅವರ ನೆರವಿನೊಂದಿಗೆ ಜವಾಬ್ದಾರಿ ಸರ್ಕಾರವನ್ನು ಸುಲಭವಾಗಿ ರಚಿಸಿಕೊಳ್ಳಲು ಸಾಧ್ಯ ಎಂಬ ಆಶಯದಿಂದ. ಇಂಥ ಬೆಳವಣಿಗೆಯಿಂದ ಮೈಸೂರಿಗರು ಮೈಸೂರನ್ನು ಹೊರತುಪಡಿಸಿದ 'ಅಖಂಡ ಕರ್ನಾಟಕ' ವನ್ನು ಕಲ್ಪಿಸಿಕೊಳ್ಳಲು ಸಹ ಸಿದ್ಧರಿರಲಿಲ್ಲ. ಈ ನಿರ್ಣಯವು ಮೈಸೂರಿನ ಏಕೀಕರಣವಾದಿ ಗಳಾಗಿದ್ದ **ಕೆಂಗಲ್ ಹನುಮಂತಯ್ಯ, ಹೆಚ್. ಸಿ. ದಾಸಪ್ಪ, ಎ.ಜಿ. ರಾಮಚಂದ್ರರಾವ್** ಮೊದಲಾದವರನ್ನು ಏಕೀಕರಣಕ್ಕೆ ಕಟ್ಟ ವಿರೋಧಿಗಳನ್ನಾಗಿ ಮಾಡಿಸಿತು. ಇದಕ್ಕೆ ಇನ್ನೊಂದು ಕಾರಣ, ಕೆ.ಪಿ.ಸಿ.ಸಿ.ಯವರು ಮೈಸೂರಿಗರ 'ಜವಾಬ್ದಾರಿ ಸರ್ಕಾರದ ರಚನೆ'ಗೆ ಬೆಂಬಲಿಸುವುದಿಲ್ಲ ಎಂಬ ಆತಂಕ ಇವರಲ್ಲಿದ್ದುದು. ಮುಂದೆ ಈ ಆತಂಕವನ್ನು ಕೆ.ಪಿ.ಸಿ.ಸಿ. ಅವರು ನಿವಾರಿಸಿ ಬೆಂಬಲಿಸಲು ಒಪ್ಪಿ ಆಶ್ವಾಸನೆ ಕೊಟ್ಟರು.[೨೨]

ದಾವಣಗೆರೆಯಲ್ಲಿ ಇನ್ನೆರಡು ನಿರ್ಣಯಗಳನ್ನು ಅಂಗೀಕರಿಸಲಾಗಿತ್ತು. ಅವುಗಳಲ್ಲಿ ಮೊದಲನೆಯದು, 'ಸಂವಿಧಾನ ರಚನಾ ಸಮಿತಿ'ಯ ಮುಂದೆ ಅಖಂಡ ಕರ್ನಾಟಕಕ್ಕಾಗಿ ಒತ್ತಾಯ ತರುವುದು. ಎರಡನೆಯದು, ಏಕೀಕರಣ ವಿಚಾರಕ್ಕೆ ಸಂಬಂಧಿಸಿದ ಎಲ್ಲ ಅಂಶಗಳನ್ನು ಪರಿಶೀಲಿಸಲು ಒಂದು ತ್ರಿಮೂರ್ತಿಗಳಿರುವ ಸಭೆಯನ್ನು ನೇಮಿಸುವುದು. ಅದರಂತೆ ಈ ಸಮಿತಿಯಲ್ಲಿ **ಎಂ.ಪಿ. ಪಾಟೀಲ, ಎಸ್. ನಿಜಲಿಂಗಪ್ಪ, ಕೆ.ಬಿ. ಜಿನರಾಜ ಹೆಗಡೆ** ಅವರುಗಳು ಇದ್ದರು. ಮುಂದೆ ಈ ಸಮಿತಿಯು **ಕರ್ನಾಟಕ ಏಕೀಕರಣ ಮಹಾಸಮಿತಿ** ಎಂಬ ಹೆಸರಿನಿಂದ ಗುರುತಿಸಿಕೊಂಡಿತು. ಇದು ಪೂರ್ಣ ಪ್ರಾತಿನಿಧ್ಯವುಳ್ಳ ಸಂಸ್ಥೆ ಆಗಿದ್ದರೂ ಏಕೀಕರಣ ಸಂಘ ಹಾಗೂ ಕೆ.ಪಿ.ಸಿ.ಸಿ.ಗಳ ಅಧೀನದಲ್ಲಿಯೆ ಕಾರ್ಯನಿರ್ವಹಿಸಬೇಕಾಗಿತ್ತು.[೪೭] ಈ ಮಹಾಸಮಿತಿಯು ಗಡಿ ಪ್ರದೇಶಗಳ ಕನ್ನಡಿಗರನ್ನು ಏಕೀಕರಣಕ್ಕಾಗಿ ಸಜ್ಜುಗೊಳಿಸುವ ಕಾರ್ಯದಲ್ಲಿ ನಿರತವಾಯಿತು. ಭಾರತದ ಸಂವಿಧಾನ ರಚನೆಗೆ ಸಂಬಂಧಿಸಿದ ಸಮಿತಿಯೊಂದು ನೇಮಕವಾದದ್ದು ೧೯೪೬ರ ಡಿಸೆಂಬರ್‌ನಲ್ಲಿ. ಇದರ ಅಧ್ಯಕ್ಷರಾಗಿದ್ದವರು **ಪಟ್ಟಾಭಿ ಸೀತಾರಾಮಯ್ಯ**. ಇದು ಕಾರ್ಯರಂಭವನ್ನು ಮಾಡಿದ ಮೇಲೆ ಭಾಷಾತತ್ವಕ್ಕೆ ಮನ್ನಣೆ ದೊರೆಯುವುದೆಂಬ ನಂಬಿಕೆ ಬಂದಿತು.

೧೯೪೭, ಇಂಡಿಯಾವು ಬ್ರಿಟಿಷ್ ವಸಾಹತುಶಾಹಿ ಆಡಳಿತದಿಂದ ಬಿಡಿಸಿಕೊಂಡ ವರುಷ. ಇಲ್ಲಿಂದ ಮುಂದಕ್ಕೆ ಇಂಡಿಯಾ ಹಾಗೂ ಕನ್ನಡದ ಭೂಪ್ರದೇಶಗಳು ಅನೇಕ ಅವಸ್ಥಾಂತರಗಳಿಗೆ ಗುರಿಯಾಗಬೇಕಾಯಿತು. ಏಕೆಂದರೆ ಆಗಸ್ಟ್ ೧೫ ರಂದು ಭಾರತವು ಭಾರತೀಯರ ಕೈಗೆ ಬಂದಾಗ ನಮ್ಮದೇ ಆದ ಸಂವಿಧಾನ, ಸೇನೆ, ಕಾನೂನು, ಪೋಲೀಸು, ಆಡಳಿತ ಮಂಡಳಿ ಮೊದಲಾದವುಗಳನ್ನು ರಚಿಸಿಕೊಳ್ಳಬೇಕಾದ ಜರೂರುಗಳು ಕಾಣಿಸಿಕೊಂಡವು. ಭಾಷಾತತ್ವದ ಮೇಲೆ ರಾಜ್ಯಗಳನ್ನು ಪುನರ್‌ವಿಂಗಡಣೆ ಮಾಡುವ ಜವಾಬ್ದಾರಿಯನ್ನು ಹೊತ್ತಿದ್ದ ಕಾಂಗ್ರೆಸ್ ಅದನ್ನು ನಿಭಾಯಿಸಿಕೊಡಬೇಕಿತ್ತು. ಕನ್ನಡಿಗರು ಬೇರೆ ಭಾಷಿಕರಂತೆಯೇ ಸ್ವಾತಂತ್ರ್ಯವು 'ಜವಾಬ್ದಾರಿ ಸರಕಾರ'ವನ್ನು (ಮೈಸೂರಿನಲ್ಲಿ) ಹಾಗೂ 'ಅಖಂಡ ಕರ್ನಾಟಕ' ನಿರ್ಮಾಣದ ಸಾಕಾರತೆಯನ್ನು ಪಡೆಯಲು ಅರಸಿ ಕುಳಿತಿದ್ದರು. ಆದರೆ ವಾಸ್ತವದಲ್ಲಿ ಇವಾವುದು ನಡೆಯಲೇ ಇಲ್ಲ. ಆಗಸ್ಟ್ ೧೫ರ ದಿನವನ್ನು ಮೈಸೂರು ಸಂಸ್ಥಾನದ ಸರಕಾರ ವಿಜೃಂಭಣೆಯಿಂದ ಆಚರಿಸಲು ಸಹ ಮುಂದಾಗಲಿಲ್ಲ. ರಾಷ್ಟ್ರೀಯ ಧ್ವಜವನ್ನು ಹಾರಿಸದಿದ್ದ ಸರ್ಕಾರದ ನಿಲುವಿನ ಬಗ್ಗೆ ಸಂಸ್ಥಾನಿ ಪ್ರಜೆಗಳಿಗೆ ಅನುಮಾನ, ಅಸಮಾಧಾನಗಳುಂಟಾದವು. ಭಾರತದ ಒಕ್ಕೂಟವನ್ನು

ಸೇರಲು ಒಪ್ಪಿಗೆ ಕೊಟ್ಟಿದ್ದ ಮೈಸೂರು ಮಹಾರಾಜರ ಬದಲಾದ ಈ ಧೋರಣೆ ಮೈಸೂರಿನ ಕಾಂಗ್ರೆಸ್ ಪಕ್ಷಕ್ಕೆ ಸರಿ ಅನ್ನಿಸಲಿಲ್ಲ.[೮೮] ಇದರಿಂದ ಬೇಸರಗೊಂಡ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಮಹಾರಾಜರ ಅರಮನೆಯ ಮುಂದೆ ಸತ್ಯಾಗ್ರಹವನ್ನು ಮಾಡಲು ನಿರ್ಧರಿಸಿತು. ಇದರ ಪರಿಣಾಮವೇ ಮೈಸೂರು ಚಲೋ ಚಳವಳಿ. ಸೆಪ್ಟೆಂಬರ್ ಒಂದರಿಂದ ಆರಂಭವಾದ ಈ ಚಳುವಳಿ ಉಗ್ರ ರೂಪತಾಳಿ ಪೊಲೀಸರಿಂದ ಗುಂಡು ಹಾರಿಸುವಂತೆ ಆಯಿತು. ಇದರಿಂದ ಸಾವು-ನೋವುಗಳಾದವು. ಕೊನೆಗೆ ಮೈಸೂರು ಕಾಂಗ್ರೇಸಿನೊಂದಿಗೆ ಸಂಧಾನಗಳು ಏರ್ಪಟ್ಟು ೨೪.೧೦.೧೯೪೭ ರಂದು ಕಾಂಗ್ರೇಸಿನ ಅಧ್ಯಕ್ಷರಾಗಿದ್ದ ಕೆ.ಸಿ. ರೆಡ್ಡಿ ಅವರು ಮೊಟ್ಟಮೊದಲ ಮುಖ್ಯಮಂತ್ರಿಗಳಾದರು. ಆ ಮೂಲಕ ಮೈಸೂರಿನಲ್ಲಿ ರಾಜಶಾಹಿ ಪಳೆಯುಳಿಕೆ ಕೊನೆಗೊಂಡು ಹೊಸ ಜವಬ್ದಾರಿ ಸರಕಾರ ಅಧಿಕಾರಕ್ಕೆ ಬಂದಿತು.

ಈ ಕಡೆ ಉತ್ತರ ಕರ್ನಾಟಕದ (ಮುಂಬಯಿ ಹಾಗೂ ಮದ್ರಾಸ್) ಶಾಸನ ಸಭೆಗಳಲ್ಲಿ ಕನ್ನಡ ಪ್ರಾಂತ್ಯಗಳ ಒಂದುಗೂಡುವಿಕೆ ಬಗ್ಗೆ ನಿರ್ಣಯಗಳನ್ನು ಪಾಸು ಮಾಡಲಾಗಿತ್ತು. ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿದ್ದ ಭಾರತೀಯ ಕಾಂಗ್ರೇಸ್, ಸ್ವಾತಂತ್ರ್ಯಕ್ಕೆ ಮುನ್ನ ನೀಡಿದ್ದ ಭಾಷಾತತ್ವದ ಆಶ್ವಾಸನೆಯ ಬಗ್ಗೆ ಈಗ ಮೌನವಹಿಸಿತ್ತು. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ (ಕಾಂಗ್ರೇಸಿನವರೆ) ಅಧಿಕಾರಕ್ಕೆ ಬಂದಿದ್ದರೂ ಮೈಸೂರಿಗರು ಶಾಸನ ಸಭೆಯಲ್ಲಿ ಏಕೀಕರಣದ ಬಗ್ಗೆ ನಿರ್ಣಯವನ್ನು ಅಂಗೀಕರಿಸಲಿಲ್ಲ. ಈ ಮಧ್ಯೆ ಆಂಧ್ರ ಮತ್ತು ಮಹಾರಾಷ್ಟ್ರಗಳಲ್ಲಿ ಭಾಷಾ ಚಳವಳಿಯನ್ನು ತೀವ್ರಗೊಳಿಸಿದ್ದರು. ತೆಲುಗರು ಬಳ್ಳಾರಿಯನ್ನೂ, ಮರಾಠಿಗರು ಬೆಳಗಾವಿಯನ್ನು ಕಬಳಿಸುವ ಎಲ್ಲ ಹುನ್ನಾರಗಳನ್ನು ನಡೆಸಿದ್ದರು. ಕೇರಳದ ಮಲೆಯಾಳಿಗಳಂತೂ ಇವರಿಬ್ಬರಿಗಿಂತಲೂ ಇನ್ನು ಒಂದು ಹೆಜ್ಜೆ ಮುಂದೆ ಹೋಗಿದ್ದುದ್ದು ಸ್ಪಷ್ಟವಾಗಿ ಕಂಡುಬರುತ್ತಿತ್ತು. ಇವರ 'ಕೇರಳ ಏಕೀಕರಣಸಭೆ'ಯು ಕೊಡಗು, ನೀಲಗಿರಿ, ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಕೇರಳದ ಭೂ ಪ್ರದೇಶಕ್ಕೆ ಸೇರಿದವು ಎಂಬ ನಿರ್ಣಯವನ್ನು ಅಂಗೀಕರಿಸಿಯೇ ಬಿಟ್ಟಿತ್ತು. ಇಂಥ ಸಂದರ್ಭದಲ್ಲಿ ಕನ್ನಡಿಗರು ತೀವ್ರವಾಗಿ ಪ್ರತಿಭಟಿಸದೆ, ಪ್ರತಿಕ್ರಿಯಿಸದೆ ಇರಲು ಸಾಧ್ಯವಿರಲಿಲ್ಲ. ಕೇರಳದ ಆಕ್ರಮಣಕಾರಿ ನಿಲುವನ್ನು ಹರಪನಹಳ್ಳಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತಿ ಬಳಗವು ಖಂಡಿಸಿತು. ಅಲ್ಲದೆ ಸಂಸ್ಥಾನಿ ಪ್ರಭುಗಳೆಲ್ಲರೂ ಏಕೀಕೃತ ಆಗಲಿರುವ ಕರ್ನಾಟಕದಲ್ಲಿ ಸೇರಿಕೊಳ್ಳಬೇಕು ಎಂಬ ಮನವಿಯನ್ನು ಇಲ್ಲಿ

ಪಾಸು ಮಾಡಲಾಗಿದೆ.[೪೯] ಇಷ್ಟೆಲ್ಲಾ ನಡೆಯುತ್ತಿದ್ದರೂ ಮೈಸೂರಿಗರು ಗಮನಾರ್ಹವಾದ ನಿಲುವನ್ನೇನು ತೆಗೆದು ಕೊಂಡಿರಲಿಲ್ಲ. ಇದರಿಂದ ಮೈಸೂರಿನ ಹೊರಗಿನವರಿಗೆ ನಿರಾಶೆ ಆಯಿತು. ಅಲ್ಲದೆ ಸ್ವಾತಂತ್ರ್ಯದ ಅನಂತರ ಸರ್ಕಾರವು ಕರ್ನಾಟಕದ ರಚನೆ ಬಗ್ಗೆ ಮೌನದಿಂದ ಇದ್ದುದ್ದು ಜನರಿಗೆ ಮತ್ತಷ್ಟು ನಿರಾಶೆಯನ್ನುಂಟು ಮಾಡಿತ್ತು. ಹೀಗಾಗಿ ೧೯೪೭ರ ಡಿಸೆಂಬರ್‌ನಲ್ಲಿ ನಡೆದ ೧೧ ನೆಯ ಏಕೀಕರಣ ಸಮ್ಮೇಳನ (ಕಾಸರಗೋಡು)ದಲ್ಲಿ ಏಕೀಕರಣದ ಬಗ್ಗೆ ಇರುವ ತುರ್ತನ್ನು ಸಾಬೀತುಪಡಿಸಬೇಕಾಯಿತು.

ಏಕೀಕರಣ ಒತ್ತಡದ ಬಗೆಗೆ ಕೇಂದ್ರದಲ್ಲಿ ಪ್ರಸ್ತಾಪಿಸಲು ೧೯೪೮ ರ ಜನವರಿಯಲ್ಲಿ ಒಂದು ಶಿಷ್ಟ ಮಂಡಳಿಯನ್ನು ಹುಟ್ಟು ಹಾಕಲಾಯಿತು. **ಎಸ್. ನಿಜಲಿಂಗಪ್ಪ** ಅವರು ಇದರ ನೇತೃತ್ವವನ್ನು ವಹಿಸಿದ್ದರು. ಈ ಮಂಡಲಿಯು **ದೆಹಲಿಗೆ ಹೋಗಿ ಗಾಂಧಿ** ಅವರನ್ನು ಕಂಡು ವಾಸ್ತವತೆಯನ್ನು ವಿವರಿಸಿತು. ಇದೇ ಸಂದರ್ಭವನ್ನು ಉಪಯೋಗಿಸಿ ಕೊಂಡ **ಆಂಧ್ರ, ಕೇರಳ, ಮಹಾರಾಷ್ಟ್ರ**ದವರೂ ಸಹ ಕೇಂದ್ರದಲ್ಲಿ ಒತ್ತಡವನ್ನು ತಂದರು. ಇವೆಲ್ಲವನ್ನು ಗಮನಿಸಿದ ಸಂವಿಧಾನ ರಚನಾ ಸಮಿತಿಯು (ಅಂದಿನ ಅಧ್ಯಕ್ಷರಾದ ಡಾ. ರಾಜೇಂದ್ರ**ಪ್ರಸಾದ್** ಅವರು) ೧೭.೬.೧೯೪೮ ರಂದು ಒಂದು ಸುತ್ತೋಲೆಯನ್ನು ಹೊರಡಿಸಿದರು. ಈ **ಸುತ್ತೋಲೆ**ಯಲ್ಲಿ ಆಂಧ್ರ, ಕರ್ನಾಟಕ, ಕೇರಳ, ಮಹಾರಾಷ್ಟ್ರ ಪ್ರಾಂತಗಳ ನಿರ್ಮಾಣ ಹಾಗೂ ಅದರಿಂದಾಗುವ ಆಡಳಿತ, ಆರ್ಥಿಕ ಮುಂತಾದ ಪರಿಣಾಮಗಳನ್ನು ವರದಿ ಮಾಡಲು ಆದೇಶಿಸಲಾಗಿತ್ತು.[೫೦] ಈ ಹಿನ್ನೆಲೆಯಲ್ಲಿ ಕೆಲಸ ಮಾಡಲು **ಭಾಷಾನ್ವಯ ರಚನಾ ಆಯೋಗ**ವೊಂದು ರಚನೆಗೊಂಡು, ಅದಕ್ಕೆ ಎಸ್.ಕೆ. ಧರ್ ಅವರು ಅಧ್ಯಕ್ಷತೆ ವಹಿಸಿದ್ದರು. ಆದ್ದರಿಂದಲೇ ಇದನ್ನು **ಧರ್ ಸಮಿತಿ** ಎನ್ನುವುದು. ಈ ಸಮಿತಿಯಲ್ಲಿ **ಡಾ. ಪನ್ನಾಲಾಲ್** ಮತ್ತು **ಜಗತ್‌ನಾರಾಯಣ ಲಾಲ್** ಅವರುಗಳು ಸದಸ್ಯರಾಗಿ ಕೆಲಸ ಮಾಡಲು ನೇಮಕಗೊಂಡಿದ್ದರು.

ಇದೇ ಕಾಲಘಟ್ಟದಲ್ಲಿಯೆ ಹೈದರಾಬಾದಿನ **ನಿಜಾಮ**ನ ಸರ್ವಾಧಿಕಾರತ್ವದ ಸಮಸ್ಯೆಯೂ ಗಮನ ಸೆಳೆಯುವಂತೆ ಮಾಡಿತ್ತು. ಇವನು ತನ್ನ ಸಂಸ್ಥಾನವನ್ನು ಸ್ವತಂತ್ರ ಭಾರತದ ಒಕ್ಕೂಟದಲ್ಲಿ ಸೇರಿಸಲು ನಿರಾಕರಿಸಿದ್ದ. ಇನ್ನಿತರ ಸಂಸ್ಥಾನದವರು ಒಕ್ಕೂಟವನ್ನು ಸೇರಲು ಅಷ್ಟಾಗಿ ಪ್ರತಿಭಟಿಸಿರಲಿಲ್ಲ. ಆದರೆ ಇವನು ಮಾತ್ರ ತನ್ನ **ರಜಾಕಾರರ ಸೈನ್ಯ**ವನ್ನು ಮುಂದಿಟ್ಟುಕೊಂಡು ಸ್ವತಂತ್ರನಾಗಿರಲು ಹುನ್ನಾರಗಳನ್ನು ನಡೆಸಿದ. ಹೀಗಾಗಿ ಕೇಂದ್ರ ಸರಕಾರವು ಅದರಲ್ಲೂ ವಲ್ಲಭಾಯಿ ಪಟೇಲರು ೧೩.೯.೧೯೪೮ ರಂದು

ಸೇನೆಯನ್ನು ನುಗ್ಗಿಸಿ ಐದು ದಿನಗಳ ಕಾಲ ಧಾಳಿ ಮಾಡಿ **ಹೈದರಾಬಾದನ್ನು** ಭಾರತದ ಒಕ್ಕೂಟಕ್ಕೆ ೧೮.೯.೧೯೪೮ ರಂದು ಸೇರುವಂತೆ ಮಾಡಿದರು. ನಿಜಾಮನು ಶರಣಾಗತನಾದ ಮೇಲೆ ಅವನ ಅಧೀನದಲ್ಲಿದ್ದ **ಹೈದರಾಬಾದ್-ಕರ್ನಾಟಕ** (ರಾಯಚೂರು, ಬೀದರ್, ಗುಲ್ಬರ್ಗಾ) ಕನ್ನಡಿಗರು ಬಿಡುಗಡೆ ಹೊಂದಿದರು. ಇದು ಏಕೀಕರಣದ ಚಳವಳಿಗೆ ಒಳ್ಳೆಯ ಸೂಚನೆಯಾಗಿ ಪ್ರೇರಣೆ ನೀಡಿತು.[೫೨]

**ಧರ್ ಸಮಿತಿಯು** ನಾಲ್ಕು ರಾಜ್ಯಗಳಿಗೆ ಸಂಬಂಧಿಸಿದ ಪ್ರಶ್ನಾವಳಿಯೊಂದನ್ನು ಸಿದ್ಧಪಡಿಸಿ ಪ್ರವಾಸ ಕೈಗೊಂಡಿತ್ತು. ಸಾವಿರಕ್ಕೂ ಹೆಚ್ಚಿನ ಮನವಿಗಳು ಹಾಗೂ ಏಳೂ ನೂರಕ್ಕೂ ಹೆಚ್ಚಿನ ಸಾಕ್ಷಿದಾರರ ಪುರಾವೆಗಳು ಈ ಸಮಿತಿಗೆ ದೊರೆತಿದ್ದವು. ಎರಡು ಭಾರಿ ಪ್ರವಾಸ ಕೈಗೊಂಡ ಈ ಸಮಿತಿ **ಮಂಗಳೂರು, ಹುಬ್ಬಳ್ಳಿಗಳಲ್ಲಿ** ಕ್ಷೇತ್ರ ಕಾರ್ಯವನ್ನು ಮಾಡಿತು. ಆದರೆ ಈ ಎರಡೂ ಭಾರಿಯೂ ಮೈಸೂರಿಗೆ ಬಂದಿರಲೇ ಇಲ್ಲ.[೫೩] ಬಾರದಿದ್ದರೂ ಇದು ಒಪ್ಪಿಸಿದ (೧೦.೧೨.೧೯೪೮) ತನ್ನ ವರದಿಯಲ್ಲಿ ೪೫ **ರ ಕಂಡಿಕೆಯ** ಪ್ರಕಾರ -

> "ಮೈಸೂರು ಒಕ್ಕೂಟವನ್ನು ಸೇರಲು ಒಪ್ಪುತ್ತಿದ್ದರೆ ಮದ್ರಾಸ್, ಮುಂಬಯಿ ಪ್ರಾಂತಗಳ ಕನ್ನಡ ಮಾತನಾಡುವ ಪ್ರದೇಶವನ್ನೆಲ್ಲ ಈ ಕೇಂದ್ರದ ಸುತ್ತಲೂ ಒಂದುಗೂಡಿಸಿ ಆಡಳಿತದ ದೃಷ್ಟಿಯಿಂದ ಅನುಕೂಲ ವಾದ ಪ್ರಾಂತವನ್ನು ಕಟ್ಟಬಹುದಾಗಿತ್ತು. ಹೀಗಾದರೆ ಈಗ ಪ್ರತ್ಯೇಕವಾಗಿದ್ದುಕೊಂಡು ಕಷ್ಟದಿಂದ ಕಾಲ ಕಳೆಯುತ್ತಿರುವ ಕೊಡಗಿನ ಸಮಸ್ಯೆಯೂ ಪರಿಹಾರವಾಗುತ್ತಿತ್ತು. ಕೊಡಗು ಮೈಸೂರಲ್ಲಿ ಸೇರಲು ಸಿದ್ಧವಿದೆ. ಆದರೆ ಮೈಸೂರನ್ನುಳಿದು ರಚಿತವಾಗುವ ಕರ್ನಾಟಕ ಪ್ರಾಂತದಲ್ಲಿ ಸೇರಲು ಇಷ್ಟಪಡುವುದಿಲ್ಲ. ಆದರೆ ಮೈಸೂರು ಕರ್ನಾಟಕದಲ್ಲಿ ಸೇರಲು ಇನ್ನು ಸಿದ್ಧವಾದಂತೆ ತೋರುವುದಿಲ್ಲ. ಹಿಂದೀ ಒಕ್ಕೂಟ ಪ್ರದೇಶವನ್ನು ಸಂಸ್ಥಾನದಲ್ಲಿ ಸೇರಿಸುವ ವಿಷಯದಲ್ಲಿ ಜನಮತವು ಇಲ್ಲವೆ ಸರಕಾರೀ ಧೋರಣವು ಅನುಕೂಲವಿದೆಯೆ ಎಂಬುದನ್ನು ನಾವು ಹೇಳಲಾರೆವು."[೫೪]

- ಎಂದು ಹೇಳುವುದರ ಮೂಲಕ ಕನ್ನಡಿಗರ ತೀವ್ರ ಪ್ರತಿಭಟನೆಗೆ ಗುರಿಯಾಯಿತು. ಗಡಿನಾಡಿನ ಕನ್ನಡಿಗರನ್ನು ಸಂಘಟಿಸುತ್ತಿದ್ದ **ಜಯದೇವಿತಾಯಿ ಲಿಗಾಡೆಯವರು** ಧರ್ ಸಮಿತಿಯ ಇಂಥ ಧೋರಣೆಯನ್ನು ಕಟುವಾಗಿ ಟೀಕಿಸಿದ್ದು ಈ ಸಮಯದಲ್ಲಿಯೆ. ಭಾಷಾ

ತತ್ವಕ್ಕೆ ಪ್ರಾಶಸ್ತ್ಯ ಕೊಡಬೇಕಿದ್ದ ಈ ಸಮಿತಿಯ ವರದಿಯು ಅದಕ್ಕೆ ಬದಲಾಗಿ ವ್ಯತಿರಿಕ್ತವಾಗಿ ಮೂಡಿಬಂದಿತ್ತು. ಉದ್ಧರಿಸುವುದಾದರೆ ಅದು -

> "ಪ್ರಾಂತಗಳನ್ನು ಕೇವಲ ಅಥವಾ ಹೆಚ್ಚಾಗಿ ಭಾಷೆಯ ದೃಷ್ಟಿಯಿಂದಲೇ ರಚಿಸುವುದು ಹಿಂದೂಸ್ತಾನದ ರಾಷ್ಟ್ರದ ಹಿತಕ್ಕೆ ವಿಘಾತಕವಾದುದರಿಂದ ಅದನ್ನು ಕೈಕೊಳ್ಳಕೂಡದು."[೨೫]

- ಎಂಬ ನಿರ್ಣಯವನ್ನು ಕೊಟ್ಟದ್ದು. ಇದು ಕನ್ನಡಿಗರನ್ನಷ್ಟೇ ಅಲ್ಲ ಎಲ್ಲ ಭಾಷಿಕರನ್ನು ಸಹ ಎದುರು ಹಾಕಿಕೊಳ್ಳುವ ಧೋರಣೆ ಆಗಿತ್ತು. ಇದನ್ನು ರದ್ದುಪಡಿಸುವಲ್ಲಿ ಆಂಧ್ರ-ಕರ್ನಾಟಕಗಳವರು ತೀವ್ರವಾಗಿ ಪ್ರತಿಭಟಿಸಿದರು. ಇವೆಲ್ಲದರ ಅಂತಿಮ ಪರಿಣಾಮವೆ ಹೊಸ ಸಮಿತಿಯೊಂದರ ನೇಮಕ. ೧೯೪೮ ರ ಡಿಸೆಂಬರ್‌ನಲ್ಲಿ ನಡೆದ ಜಯಪುರ ಕಾಂಗ್ರೇಸ್ ಅಧಿವೇಶನದಲ್ಲಿ ತ್ರಿಮೂರ್ತಿ ಸಮಿತಿಯನ್ನು ಈ ಬಗ್ಗೆ ವರದಿ ನೀಡಲು ನೇಮಿಸಲಾಯಿತು. ಇದನ್ನು ಜೆ.ವಿ.ಪಿ.ಕಮಿಟಿ ಎಂತಲೂ ಕರೆಯುತ್ತಾರೆ.[೨೬] ಈ ಸಮಿತಿಯು ತನ್ನ ವರದಿಯಲ್ಲಿ (೧.೪.೧೯೪೯) ಆಂಧ್ರ ಪ್ರದೇಶದ ರಚನೆಗೆ ಹೆಚ್ಚಿನ ಒಲವು ಹಾಗೂ ಆದ್ಯತೆಯನ್ನು ಕೊಟ್ಟಿತ್ತು. ಕೇರಳ-ಕರ್ನಾಟಕ ಅಥವಾ ಇನ್ನಾವುದೆ ಭಾಷಿಕ ಪ್ರಾಂತ್ಯಗಳ ರಚನೆ ಬಗ್ಗೆ ಇದು ಸ್ಪಷ್ಟ ನಿರ್ಣಯವನ್ನು ಮಂಡಿಸಿರಲಿಲ್ಲ. ಮಹಾರಾಷ್ಟ್ರದಲ್ಲಿ ಮುಂಬಯಿಯನ್ನು ಸೇರಿಸುವ ಅಗತ್ಯ ಇಲ್ಲ ಎಂಬ ನಿರ್ಣಯ ಮರಾಠಿಗರಲ್ಲೂ ಸಹ ಅಸಮಾಧಾನವನ್ನುಂಟು ಮಾಡಿತ್ತು.

ಜೆ.ವಿ.ಪಿ. ಸಮಿತಿ ವರದಿ ಹಾಗೂ ಸಮಕಾಲೀನ ಆಗು-ಹೋಗುಗಳು ಕನ್ನಡಿಗರನ್ನು ಭಿನ್ನ ರೀತಿಯಲ್ಲಿ ಪ್ರತಿಕ್ರಿಯಿಸುವಂತೆ ಮಾಡಿದ್ದವು. ಏಕೀಕರಣದ ಬಗೆಗಿನ ನಿಲುವುಗಳು ಸ್ಪಷ್ಟವಾಗಿ ಹೊರಹೊಮ್ಮುವಂತೆ ಆಗಿದ್ದು ಈ ಸಂದರ್ಭದಲ್ಲಿಯೆ. ಅಂದರೆ ಮೈಸೂರಿಗರು ಹಾಗೂ ಉತ್ತರ ಭಾಗದ ಕನ್ನಡಿಗರು ತಮ್ಮ ತಮ್ಮ ನಿಲುವುಗಳನ್ನು ಬಹಿರಂಗವಾಗಿ ವ್ಯಕ್ತಪಡಿಸಿದರು. ಈ ನೆಲೆಗಳು ಪ್ರಾದೇಶಿಕ, ಆರ್ಥಿಕ ಹಾಗೂ ಜಾತೀಯ ಹಿನ್ನೆಲೆಯಲ್ಲಿ ವ್ಯಕ್ತಗೊಂಡಿವೆ. ವರದಿ ಬಗ್ಗೆ ತೀವ್ರ ವಿರೋಧ ವ್ಯಕ್ತಪಡಿಸಿದ ಉತ್ತರ ಕರ್ನಾಟಕದ ಕನ್ನಡಿಗರು ತಮ್ಮ ಎಂದಿನ ಸೊಗಡನ್ನು ಉಳಿಸಿಕೊಂಡರೆ, ಈ ಕಡೆಗೆ ಮೈಸೂರಿಗರು ತಮ್ಮ ಹಿಂದಿನ ಮೌನವನ್ನು ಮುಂದುವರೆಸಿದ್ದರು. ಆದರೆ ಏಕೀಕರಣದ ತುರ್ತನ್ನು ಗಮನದಲ್ಲಿ ಇಟ್ಟುಕೊಂಡು ಮೈಸೂರಿನ ಕೆಲವರನ್ನು ಬಿಟ್ಟರೆ ಬಹುಸಂಖ್ಯಾತರು 'ಎರಡು ಕರ್ನಾಟಕ'ಗಳ ಬಗ್ಗೆ ಮಾತನಾಡಲಾರಂಭಿಸಿದ್ದರು. ಅಂದರೆ ವ್ಯಾಮೋಹಿ 'ಮಾವರಿ

ಮೈಸೂರ'ನ್ನು ಹಾಗೆಯೇ ಉಳಿಸಿಕೊಂಡು, ಉಳಿದ ಪ್ರಾಂತ್ಯಗಳನ್ನೊಳಗೊಂಡ ಇನ್ನೊಂದು ಕರ್ನಾಟಕ ರಚನೆ ಆಗಲಿ ಎಂಬ ಇಂಗಿತ. ಈ ವೇಳೆಗಾಗಲೇ ಹಳೆಯ ಮೈಸೂರು ಸಂಸ್ಥಾನವು ಆರ್ಥಿಕವಾಗಿ ಅಭಿವೃದ್ಧಿಗೊಂಡಿದ್ದರಿಂದ ಉತ್ತರದ ಕನ್ನಡ ಪ್ರಾಂತ್ಯಗಳನ್ನೂ ಅದೇ ಮಟ್ಟಕ್ಕೆ ತರಲು ತಮ್ಮ ಬೊಕ್ಕಸವನ್ನು ಬರಿದು ಮಾಡಿಕೊಳ್ಳುವ ಪ್ರಸಂಗ ಬರಬಹುದು ಎಂಬ ಆತಂಕಗಳನ್ನು ಬೆಳೆಸಿಕೊಂಡಿದ್ದರು. ಇದರ ಜೊತೆಗೆ ಉತ್ತರದ ವೀರಶೈವರು ಏಕೀಕರಣದಿಂದಾಗಿ ಪ್ರಾಬಲ್ಯರಾಗುವರೆಂಬ ಹಾಗೂ ಅಧಿಕಾರದ ಚುಕ್ಕಾಣಿ ಹಿಡಿಯುವರೆಂಬ ಗುಮಾನಿ, ಆತಂಕಗಳು ಮೈಸೂರಿನ ಒಕ್ಕಲಿಗ-ಗೌಡರಲ್ಲಿ ಬಹಿರಂಗ ಗೊಂಡವು. ಆತಂಕಪಟ್ಟವರಲ್ಲಿ **ಎಚ್.ಕೆ. ವೀರಣ್ಣಗೌಡ, ಕಡಿದಾಳ್ ಮಂಜಪ್ಪ, ಕೆ.ವಿ. ಶಂಕರಗೌಡ, ಹುಚ್ಚ ಮಾಸ್ತಿಗೌಡ** ಮೊದಲಾದವರು ಪ್ರಮುಖರು. ಇಂಥ ವಿಷಮ ಪರಿಸ್ಥಿತಿಗಳನ್ನು ಹೋಗಲಾಡಿಸಲು **ಶಾಂತವೇರಿ ಗೋಪಾಲಗೌಡ**ರು ಅನೇಕ ಪ್ರಯತ್ನಗಳನ್ನು ಮಾಡಿದರು. ಆದರೆ ಏಕೀಕರಣಕ್ಕೆ ಪರವಾಗಿದ್ದ ಎ.ಜೆ. **ರಾಮಚಂದ್ರ ರಾವ್, ಹೆಚ್.ಜಿ. ದಾಸಪ್ಪ** ಮೊದಲಾದ ಮೈಸೂರುವಾದಿಗಳು ಸಹ ಕಟ್ಟಾ ವಿರೋಧಿಗಳಾಗಿ ಮಾರ್ಪಾಟ್ಟದ್ದು ವಿರೋಧಾಭಾಸವೇ ಸರಿ.[೫೨]

ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿ ಸದಸ್ಯರು **ಹುಬ್ಬಳ್ಳಿ**ಯಲ್ಲಿ ೧೯.೧.೧೯೪೯ ರಂದು ಸಭೆ ಸೇರಿದರು. ಈ ಸಭೆಯ ಉದ್ದೇಶ **ಧರ್ ಸಮಿತಿ**ಯ ವರದಿಯನ್ನು ವಿರೋಧಿಸುವುದರ ಜೊತೆಗೆ ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದಂತೆ ನಿರ್ಣಯಗಳನ್ನು ತೆಗೆದುಕೊಳ್ಳುವುದು. ಇದೇ ದಿನದಂದು ಮೈಸೂರು ಸಂಸ್ಥಾನದ **ಹರಿಹರ**ದಲ್ಲಿ ಮೈಸೂರು ಕಾಂಗ್ರೆಸ್ಸಿಗರು ಸಭೆ ಸೇರಿದರು. ಇಲ್ಲಿ ಮೈಸೂರು ಸಂಸ್ಥಾನವನ್ನೊಳಗೊಂಡ ಕರ್ನಾಟಕದ ರಚನೆ ಹಾಗೂ **ಮಹಾರಾಜ**ರನ್ನು ರಾಜ್ಯಪಾಲರನ್ನಾಗಿ ಆಯ್ಕೆ ಮಾಡಿಕೊಳ್ಳುವ ಗೊತ್ತುವಳಿಯನ್ನು ಸ್ವೀಕರಿಸಲಾಯಿತು.[೫೯] ಈ ಸಂದರ್ಭದಲ್ಲಿ ಆಗ ತಾನೆ ನಿಜಾಮನಿಂದ ಮುಕ್ತಗೊಂಡಿದ್ದ **ಹೈದರಾಬಾದ್-ಕರ್ನಾಟಕ**ದ ಕನ್ನಡಿಗರು ಸಭೆ ಸೇರುವುದು ಅನಿವಾರ್ಯ ಆಗಿತ್ತು. ಏಕೆಂದರೆ ತಮ್ಮನ್ನು ತಾವು ಎಲ್ಲಿ ಗುರುತಿಸಿಕೊಳ್ಳಬೇಕು ಎಂಬ ಪ್ರಶ್ನೆ ಇವರ ಮುಂದೆ ಇದ್ದುದರಿಂದ. ಮೊಟ್ಟಮೊದಲ ಭಾರಿಗೆ ಏಕೀಕರಣದ ಸಮ್ಮೇಳನವನ್ನು ಕಲ್ಬುರ್ಗಿಯಲ್ಲಿ ನಡೆಸಿದ ಈ ಭಾಗದವರು ತಮ್ಮ ತುಡಿತಗಳನ್ನು ಅಭಿವ್ಯಕ್ತಿಸಿದರು. ಅಂದರೆ ೬.೩.೧೯೪೯ ರಂದು ಸಭೆ ಸೇರಿ ಕರ್ನಾಟಕ ರಾಜ್ಯ ನಿರ್ಮಾಣವಾಗಲಿರುವ ಸಂದರ್ಭದಲ್ಲಿ ತಮ್ಮನ್ನು ತಾವು ಹಾಗೂ ಕನ್ನಡ ಪ್ರದೇಶಗಳನ್ನು ಸೇರಿಸಿಕೊಳ್ಳಬೇಕು ಎಂಬ ನಿರ್ಣಯವನ್ನು ಅಂಗೀಕರಿಸಲಾಯಿತು.

**ಜೆ.ವಿ.ಪಿ.** ವರದಿಯು ಜನರನ್ನು ತೃಪ್ತಿಪಡಿಸದೆ ಇದ್ದುದನ್ನು ಕರ್ನಾಟಕ ಪ್ರದೇಶ ಕಾಂಗ್ರೆಸ್ ಬಹಳ ಸೂಕ್ಷ್ಮವಾಗಿ ಪರಿಶೀಲಿಸಿತು. ಅಲ್ಲದೆ ಸಭೆ ಸೇರಿ ವರದಿ ವಿರುದ್ಧ ಪ್ರತಿಭಟಿಸಲು ಕೇಂದ್ರ ಮತ್ತು ಪ್ರಾಂತ್ಯಗಳ ಶಾಸನ ಸಭಾ ಸ್ಥಾನಗಳಿಗೆ ಕನ್ನಡ ಪ್ರದೇಶಗಳ ಶಾಸಕರು ರಾಜೀನಾಮೆ ನೀಡಲು ಕರೆ ನೀಡಲಾಯಿತು. ೩.೧೨.೧೯೪೯ ರಂದು ಕೊಟ್ಟ ಈ ಕರೆಗೆ ಕಾಂಗ್ರೆಸ್ಸೇತರರಿಂದಲೂ ಒಳ್ಳೆಯ ಪ್ರತಿಕ್ರಿಯೆ ಬಾರದೆ ಇರಲಿಲ್ಲ. ವರದಿಯಲ್ಲಿನ ಆಂಧ್ರದ ಬಗೆಗಿನ ನಿಲುವನ್ನು ಗಮನಿಸಿ ಅದರ ಜೊತೆ ಜೊತೆಗೆ ಕರ್ನಾಟಕದ ನಿರ್ಮಾಣವೂ ಆಗಬೇಕೆಂಬುದು ಕನ್ನಡಿಗರ ನಿಲುವು. ಇಂಡಿಯಾವು **೨೬.೧.೧೯೫೦** ರಂದು **ಗಣರಾಜ್ಯ** ಆಗುವುದರ ಜೊತೆಗೆ ಸಂವಿಧಾನಬದ್ಧ ಔಪಚಾರಿಕ ಕಾರ್ಯಗಳನ್ನು ಆರಂಭಿಸಿತು. ಇದೇ ದಿನದಂದು ತಮ್ಮ ರಾಜ್ಯವು ಅಸ್ತಿತ್ವಕ್ಕೆ ಬರುತ್ತದೆ ಎಂದು ತಿಳಿದಿದ್ದ ಆಂಧ್ರದ ತೆಲುಗರಿಗೆ ಹೆಚ್ಚಿನ ನಿರಾಶೆ ಉಂಟಾಗದೆ ಇರಲಿಲ್ಲ. ಕೇಂದ್ರದ ವಿಳಂಬ ಧೋರಣೆಯು ಎಲ್ಲ ಭಾಷಿಕರಿಗೂ ಅಸಮಾಧಾನವನ್ನುಂಟು ಮಾಡಿತ್ತು. ಭಾಷಾ ಚಳವಳಿಗಳು ತೀವ್ರವಾಗ ತೊಡಗಿದವು. ಸಂವಿಧಾನವನ್ನು ಅಧಿಕೃತವಾಗಿ ಹೊಂದಿದ ಅನಂತರ ಭಾಷಾವಾರು ಪ್ರಾಂತ್ಯಗಳನ್ನು ನಿರ್ಮಿಸುವ ಜರೂರಿತ್ತು. ಈ ಹಿನ್ನೆಲೆಯಲ್ಲಿಯೆ ಸಂವಿಧಾನ ಶಿಲ್ಪಿ **ಬಾಬಾ ಸಾಹೇಬ್ ಅಂಬೇಡ್ಕರ್** ಅವರು -

> “ಎಲ್ಲಿಯವರೆಗೆ ಪ್ರಾಂತಗಳು ಪ್ರಜಾಸತ್ತಾತ್ಮಕ ಸಂವಿಧಾನವನ್ನು ಹೊಂದಿರುವುದಿಲ್ಲವೋ, ಅಥವಾ ಹೊಸ ಸಂವಿಧಾನ ಕೊಡಮಾಡುವ, ವಿಸ್ತೃತ ಸಾರ್ವಭೌಮ ಅಧಿಕಾರಗಳನ್ನು ಹೊಂದಿರುವುದಿಲ್ಲವೋ ಅಲ್ಲಿಯವರೆಗೆ ಭಾಷಾವಾರು ಪ್ರಾಂತ ರಚನೆಯ ಬೇಡಿಕೆ ತುರ್ತಿನ ದಾಗಿರಲಿಲ್ಲ. ಆದರೆ ಹೊಸ ಸಂವಿಧಾನ ಜಾರಿಯಾದ ಬಳಿಕ, ಈ ಸಮಸ್ಯೆ ತೀವ್ರ ಸ್ವರೂಪ ತಳೆದಿದ್ದು, ಅದರ ಪರಿಹಾರ ತುರ್ತಾಗಿ ಆಗಬೇಕಾಗಿರುತ್ತದೆ.”[೬೦]

- ಎಂಬ ಇಂಗಿತವನ್ನು ವ್ಯಕ್ತಪಡಿಸಿದ್ದು.

ಭಾರತದ ರಾಷ್ಟ್ರೀಯ ಕಾಂಗ್ರೆಸಿನ ಅಧ್ಯಕ್ಷರಾದ **ಪುರುಷೋತ್ತಮದಾಸ ಟಂಡನ್** ಅವರು **೨೦.೪.೧೯೫೧** ರಂದು ಬೆಂಗಳೂರಿಗೆ ಬಂದಿದ್ದರು. ಈ ಸಂದರ್ಭವನ್ನು ಉಪಯೋಗಿಸಿಕೊಂಡ ‘ಏಕೀಕರಣ ಸಂಘ’ದ ಸದಸ್ಯರು ಕರ್ನಾಟಕದ ಅಸ್ತಿತ್ವದ ಬಗ್ಗೆ ಒತ್ತಡ ತಂದರು. ಮುಂದೆ ಬರಲಿದ್ದ (೧೯೫೨) ಸಾರ್ವತ್ರಿಕ ಚುನಾವಣೆಗಳನ್ನು

ಎದುರಿಸಲು ಎಲ್ಲ ರಾಜಕೀಯ ಪಕ್ಷಗಳು ಸಿದ್ಧತೆ ನಡೆಸಿದ್ದವು. ಇದನ್ನು ಅರಿತ ಕೆ.ಪಿ.ಸಿ.ಸಿ.ಅವರು ೧೩.೭.೧೯೫೧ ರಂದು ಬೆಂಗಳೂರಿನಲ್ಲಿಯೆ ಸಭೆ ಸೇರಿ ತಮ್ಮ ಚುನಾವಣಾ ಪ್ರಣಾಳಿಕೆಯನ್ನು ಸಿದ್ಧಪಡಿಸಿದರು. ಅದರಲ್ಲಿ ಭಾಷಾತತ್ವದ ಆಧಾರದ ಮೇಲೆ ಕರ್ನಾಟಕವನ್ನು ಏಕೀಕರಣ ಗೊಳಿಸುವುದು ಮುಖ್ಯ ಘೋಷಣೆ ಆಗಿತ್ತು. ಅಂತೆಯೇ ಎಲ್ಲ ರಾಜಕೀಯ ಪಕ್ಷಗಳು ಈ ಏಕೀಕರಣದ ಪ್ರಶ್ನೆಯನ್ನೇ ಮುಂದುಮಾಡಿಕೊಂಡು ಓಟುಗಳನ್ನು ಕೇಳತೊಡಗಿದವು. ಅಂತಿಮ ಪರಿಣಾಮವಾಗಿ ಚುನಾವಣೆಯಲ್ಲಿ ಗೆದ್ದುದು ಕಾಂಗ್ರೇಸ್ ಪಕ್ಷವೆ. ಕೇಂದ್ರ ಹಾಗೂ ಪ್ರಾಂತೀಯ ಮಟ್ಟಗಳಲ್ಲಿ ನಿಚ್ಚಳ ಬಹುಮತದೊಂದಿಗೆ ಅಧಿಕಾರವನ್ನು ಸ್ಥಾಪಿಸಿತು. ಆದರೆ ಅಧಿಕಾರಕ್ಕೆ ಬಂದ ಮೇಲೆ ಭಾಷಾವಾರು ಪ್ರಾಂತ್ಯಗಳ ನಿರ್ಮಾಣದ ಬಗ್ಗೆ ಎಂದಿನಂತೆ ಮೌನವಹಿಸಿದ ಕಾಂಗ್ರೇಸ್‌ನ ಧೋರಣೆ ಚಳವಳಿಗಾರರ ತೀವ್ರ ಟೀಕೆಗೆ ಗುರಿಯಾಗದೆ ಇರಲಿಲ್ಲ. **ಲೋಕಸಭೆಯಲ್ಲಿ** ಈ ಬಗ್ಗೆ ಪ್ರಸ್ತಾಪಿಸಿದ (ಜುಲೈ ೧೯೫೨ ರಲ್ಲಿ) **ಕಮ್ಯುನಿಸ್ಟ್ ಪಕ್ಷದ** ಸದಸ್ಯರು ಕಾಂಗ್ರೇಸಿನ ಹಾಗೂ ಪ್ರಧಾನಿ **ನೆಹರು** ಅವರ ಉಪೇಕ್ಷಾ ನೀತಿಯನ್ನು ಖಂಡಿಸಿದರು. ಆದರೆ ನೆಹರು ಅವರು ದೇಶದ ಭದ್ರತೆ, ಆರ್ಥಿಕ ಆದ್ಯತೆಗಳ ಬಗ್ಗೆ ಪ್ರಥಮ ಆದ್ಯತೆ ನೀಡಿರುವುದಾಗಿ ನೆಪ ಮಾಡಿಕೊಂಡು ಮಾತನಾಡಿದರು. ಅಲ್ಲದೆ ಭಾಷಾತತ್ವಕ್ಕೆ ಸೂಕ್ತ ಸಮಯದಲ್ಲಿ ಆದ್ಯತೆ ಕೊಡುವುದಾಗಿ ಹೇಳಿ ಜಾರಿಕೊಂಡರು.

ಭಾಷಿಕ ಚಳವಳಿಗಳಲ್ಲಿ ನಿರತರಾಗಿದ್ದ **ಆಂಧ್ರ, ಕರ್ನಾಟಕ, ಕೇರಳ, ಗುಜರಾತ್, ಮಹಾರಾಷ್ಟ್ರದ** ಜನತೆಗೆ ಕಾಂಗ್ರೇಸಿನ ಮಂದಗತಿ ಧೋರಣೆ ಹಿಡಿಸಲಿಲ್ಲ. ತಮ್ಮ ತಮ್ಮ ನೆಲೆಗಳಲ್ಲಿಯೆ ಹೊಸ ಪ್ರಯೋಗಗಳ ಮೂಲಕ ಪ್ರತಿಭಟಿಸಲಾರಂಭಿಸಿದ್ದರು. ಈ ಸಮಯವನ್ನು ಉಪಯೋಗಿಸಿಕೊಂಡ ಕಾಂಗ್ರೇಸ್ಸೇತರ ರಾಜಕೀಯ ಪಕ್ಷಗಳು ಕಾಂಗ್ರೇಸ್ಸನ್ನು ತೀವ್ರವಾಗಿ ಟೀಕಿಸಿ ಜನರ ಭಾವನೆಗಳಿಗೆ ತೀರ ಹತ್ತಿರವಾದವು. ಕರ್ನಾಟಕದಲ್ಲೂ ಇದೇ ಸನ್ನಿವೇಶ ಏರ್ಪಟ್ಟಿತ್ತು. ಈ ಹಿನ್ನಲೆಯಲ್ಲಿ **ಸೋಷಯಲಿಸ್ಟ್** ಹಾಗೂ **ಕಮ್ಯುನಿಸ್ಟ್ ಪಕ್ಷಗಳ** ಪಾತ್ರ ದೊಡ್ಡದು. ರಾಜ್ಯ ರಚನೆಯಲ್ಲಿ ನಿಶ್ಚಿತವಾದ ನಿಲುವನ್ನು ಹೊಂದಿದ್ದ ಕಮ್ಯುನಿಸ್ಟರು ಕೇಂದ್ರದ ಮೇಲೆ ಪ್ರಬಲ ಒತ್ತಡ ತಂದರು. ಮಂಗಳೂರಿನ **ಕಾಮ್ರೇಡ್ ಎಸ್.ವಿ. ಘಾಟೆ** ಅವರು 'ಭಾರತ ಕಮ್ಯುನಿಸ್ಟ್ ಪಕ್ಷ'ದ ಸ್ಥಾಪಕರಲ್ಲಿ ಒಬ್ಬರು. ಇವರು ಪಕ್ಷದ ಮೊದಲ ಕಾರ್ಯದರ್ಶಿಯೂ ಹೌದು. ಎಲ್ಲ ವಿಭಜಿತ ಕನ್ನಡ ಪ್ರದೇಶಗಳ ಬಗ್ಗೆ ಒಂದೆ ದೃಷ್ಟಿಕೋನವನ್ನು ಇಟ್ಟುಕೊಂಡಿದ್ದ ಇವರು ಭಿನ್ನತೆಗಳನ್ನು ಎಣಿಸಿದವರಲ್ಲ.

ಪಕ್ಷದ ಕರ್ನಾಟಕ ಶಾಖೆಯನ್ನು ಬಲಪಡಿಸುವುದು, ಸಂಘಟಿಸುವುದು ಇವರ ಕಾರ್ಯ ಯೋಜನೆ ಆಗಿತ್ತು. ಈ ಹಿನ್ನೆಲೆಯಲ್ಲಿ **ಕಾ.ಎಸ್.ಎಲ್. ಉಪಾಧ್ಯಾಯ** (ದಕ್ಷಿಣ ಕನ್ನಡ) ಅವರನ್ನು ಸಂಘಟನಾ ಕಾರ್ಯದರ್ಶಿಯನ್ನಾಗಿ 'ಕರ್ನಾಟಕ ಸಂಘಟನಾ ಸಮಿತಿ'ಯೊಂದನ್ನು ನೇಮಿಸಲಾಯಿತು. ಅಲ್ಲದೆ ಕೊಡಗಿಗೆ **ಸಿ.ಬಿ. ಮೊನ್ನಯ್ಯ**, ಧಾರವಾಡಕ್ಕೆ **ಎ.ಜೆ. ಮುಧೋಳ**, ಬಿಜಾಪುರಕ್ಕೆ **ಬಾಲಸಿಂಗ ಮಾಸ್ತರ**, ಗುಲ್ಬರ್ಗಾಕ್ಕೆ **ಶ್ರೀನಿವಾಸ ಗುಡಿ**, ಬೀದರ್‌ಗೆ **ವಿ.ಎಸ್. ಪಾಟೀಲ** ಹಾಗೂ ದಕ್ಷಿಣ ಕನ್ನಡಕ್ಕೆ **ಬಿ.ವಿ. ಕಕ್ಕಿಲ್ಲಾಯ, ಎಸ್.ಎನ್. ಹೊಳ್ಳ, ಶಾಂತರಾಮ ಪೈ, ಸಿಂಪ್ಸನ್ ಸೋನ್ಸ್** ಮೊದಲಾದವರು ನೇಮಕಗೊಂಡಿದ್ದರು. ಇವರಲ್ಲಿ ಅನೇಕರ ಭಾಷೆ ಕನ್ನಡ ಆಗಿರಲಿಲ್ಲ. ಆದರೆ ಇವರುಗಳು ದುಡಿದದ್ದು ಮಾತ್ರ ಕನ್ನಡ-ಕರ್ನಾಟಕಕ್ಕಾಗಿ.[೬೧] ಹೀಗೆ ೧೯೫೦ ರಿಂದೀಚೆಗೆ ಕಮ್ಯುನಿಸ್ಟ್ ಪಕ್ಷವು ಏಕೀಕರಣಕ್ಕಾಗಿ ಹೆಚ್ಚಿನ ಸಂಘಟಿತ ರೂಪವನ್ನು ಪಡೆದು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು.

ಮದ್ರಾಸ್, ಮುಂಬಯಿ, ಕೊಡಗು ಹಾಗೂ ಇನ್ನಿತರೆ ಸಂಸ್ಥಾನಿ ಕನ್ನಡಿಗರು ಏಕೀಕರಣದ ಆಶಯದಿಂದ ಮೈಸೂರಿಗರೊಂದಿಗೆ ಸೇರಿ ಜವಾಬ್ದಾರಿ ಸರಕಾರಕ್ಕಾಗಿ ಬೆಂಬಲಿಸಿದ್ದರು. ಜವಾಬ್ದಾರಿ ಸರಕಾರವು ಅಸ್ತಿತ್ವಕ್ಕೆ ಬಂದು, ಕಾಂಗ್ರೆಸ್ಸು ಅಧಿಕಾರ ದಲ್ಲಿದ್ದರೂ ಏಕೀಕರಣದ ಬಗ್ಗೆ ಅಂಥ ಒಳ್ಳೆಯ ಪ್ರತಿಕ್ರಿಯೆ ಬಾರದಿದ್ದುದು ಮೈಸೂರೇತರರ ಉತ್ಸಾಹವನ್ನು ಕಡಿಮೆ ಮಾಡುತ್ತಿತ್ತು. ಅಷ್ಟೇ ಅಲ್ಲದೆ **ಆರ್.ಆರ್. ದಿವಾಕರ**, ಎಸ್. ನಿಜಲಿಂಗಪ್ಪ, **ಕರಮರಕರ**, ಹಳ್ಳಿಕೇರಿ ಮೊದಲಾದ ಕಾಂಗ್ರೆಸ್ ಧುರೀಣರು ಪ್ರಧಾನಿ ನೆಹರು ಅವರೊಂದಿಗೆ ನಿಷ್ಠುರರಾಗಲು ಇಷ್ಟಪಡದೆ ಏಕೀಕರಣದ ಪ್ರಸ್ತಾಪವನ್ನು ಮಾಡದೆ ಇದ್ದುದು ಚಳವಳಿಗಾರರಿಗೆ ಅಸಮಾಧಾನವನ್ನುಂಟು ಮಾಡಿತ್ತು. ಹೀಗಾಗಿ ಅನೇಕರು ರಾಜಕೀಯ ಪಕ್ಷಗಳಿಂದ ಅದರಲ್ಲೂ ಕಾಂಗ್ರೆಸಿನಿಂದ ಹೊರಬಂದು ಸಾಹಿತ್ಯಕ-ಸಾಂಸ್ಕೃತಿಕ ಸಂಘಟನೆಗಳೊಂದಿಗೆ ಏಕೀಕರಣಕ್ಕಾಗಿ ತಲ್ಲೀನರಾದರು. ಇದರ ಪರಿಣಾಮವಾಗಿ ಪರಿಷತ್ತಿನ ಸಾಹಿತ್ಯ ಸಮ್ಮೇಳನಗಳಿಗೆ ಹೆಚ್ಚಿನ ಪ್ರಾಶಸ್ತ್ಯ ದೊರೆಯಿತು. ಈ ಹಿನ್ನೆಲೆಯಲ್ಲಿ ೧೯೫೦ ರ ಸೊಲ್ಲಾಪುರದ ಸಾಹಿತ್ಯ ಸಮ್ಮೇಳನ ಬಹಳ ಮುಖ್ಯವಾದುದು. ಇಲ್ಲಿ -

> "ಭಾಷಾವಾರು ಪ್ರಾಂತ ರಚನೆ ತತ್ವಕ್ಕೆ ಅನುಗುಣವಾಗಿ ಮೈಸೂರನ್ನೊಳ ಗೊಂಡ ಕರ್ನಾಟಕ ಪ್ರಾಂತ ರಚನೆಯನ್ನು ಆದಷ್ಟು ಬೇಗನೆ ಮಾಡ ಬೇಕೆಂದು ಕೇಂದ್ರ ಸರಕಾರವನ್ನು ಈ ಸಮ್ಮೇಳನ ಪ್ರಾರ್ಥಿಸುತ್ತದೆ."[೬೨]

- ಎಂಬ ನಿರ್ಣಯವನ್ನು ಅಂಗೀಕರಿಸಲಾಗಿದೆ. ಹೀಗೆ ಸ್ಪಷ್ಟವಾಗಿ, ನೇರವಾಗಿ ಹಾಗೂ ಅಧಿಕೃತವಾಗಿ ಪರಿಷತ್ತು ನಿರ್ಣಯ ತೆಗೆದುಕೊಂಡದ್ದು ಇದೇ ಮೊದಲು. ಈ ಮಧ್ಯೆ ಬೆಂಗಳೂರಿಗೆ ಆಗಮಿಸಿದ್ದ (೧೯೫೧ ರ ವರ್ಷದಲ್ಲಿ) **ಡಾ. ರಾಜೇಂದ್ರಪ್ರಸಾದ್, ಡಾ. ಟಂಡನ್**, ಜಿ.ವಿ. **ಪಂತ್** ಮೊದಲಾದ ರಾಷ್ಟ್ರೀಯ ನಾಯಕರುಗಳಿಗೆ **ಬಿ. ಶಿವಮೂರ್ತಿ** ಶಾಸ್ತ್ರಿಗಳ ನಿಯೋಗ ಮನವಿ, ದೂರುಗಳನ್ನು ಸಲ್ಲಿಸುವ ಕಾರ್ಯದಲ್ಲಿ ತೊಡಗಿತ್ತು. ಆಂಧ್ರಿಗರು ಸಹ ಕಾಂಗ್ರೆಸಿನಿಂದ ಬೇಸತ್ತು ಭಿನ್ನವಾದ ಚಳವಳಿಗಳಲ್ಲಿ ತೀವ್ರತೆ ಪಡೆಯುತ್ತಿದ್ದರು. ಇದು ಕನ್ನಡಿಗರ ಗಮನ ಸೆಳೆಯುವಂತಾಗಿತ್ತು. ಪರಿಣಾಮವಾಗಿ ಗಡಿ ಪ್ರದೇಶಗಳಲ್ಲಿನ ಕನ್ನಡ ಜಾಗೃತಿ ಕೆಲಸಗಳು ತೀವ್ರವಾದವು. ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ., ಬೆನಗಲ್ ರಾಮರಾವ್, ಜಿನರಾಜ ಹೆಗ್ಗಡೆ, ಮಾಸ್ತಿ, ಶಿವಮೂರ್ತಿ ಶಾಸ್ತ್ರಿ, ಎಂ.ಎಸ್.ಸರ್ದಾರ್, ಆರ್. ನಾಗನಗೌಡ, ದೇವುಡು ಮೊದಲಾದವರ ಕಾರ್ಯ ಚಟುವಟಿಕೆಗಳು ಪ್ರಮುಖವಾಗಿದ್ದವು. ಅಲ್ಲದೆ ಕರಮರಕರ್, ಎಸ್.ವಿ. ಕೃಷ್ಣಮೂರ್ತಿ ರಾವ್, ದಿವಾಕರ, ಎಸ್. ನಿಜಲಿಂಗಪ್ಪ, ಎಸ್.ಆರ್. ಕಂಠಿ, ಬಿ.ಡಿ. ಜತ್ತಿ, ಜಿ.ವಿ. ಹಳ್ಳಿಕೇರಿ, ಫ.ಗು. ಹಳಕಟ್ಟಿ, ಹರ್ಡೇಕರ ಮಂಜಪ್ಪ, ಎಸ್.ಎಸ್. ಬಸವನಾಳ್, ಪಂಜೆ ಮಂಗೇಶರಾವ್, ಮುಳಿಯ ತಿಮ್ಮಪ್ಪಯ್ಯ, ಗೋವಿಂದ ಪೈ, ರಾಮಕೃಷ್ಣ ಕಾರಂತ, ಎಂ.ಎಚ್. ಕೃಷ್ಣ ಮೊದಲಾದವರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಏಕೀಕರಣಕ್ಕಾಗಿ ಶ್ರಮಿಸುತ್ತಿದ್ದರು.

ಹಳೆಯ ಮೈಸೂರಿನಲ್ಲಿ ಕಾಂಗ್ರೆಸ್ ಗೆದ್ದು ಬಂದ ಮೇಲೆ **ಕೆಂಗಲ್ ಹನುಮಂತಯ್ಯ** ಅವರು ಮುಖ್ಯಮಂತ್ರಿಗಳಾಗಿದ್ದರು. ಅಲ್ಲಿಯವರೆಯೂ ಈ ಪದವಿಯಲ್ಲಿದ್ದ **ಕೆ.ಸಿ.** ರೆಡ್ಡಿ ಕೇಂದ್ರದಲ್ಲಿ ಮಂತ್ರಿಗಳಾಗಿ ಹೋಗಿದ್ದರು. ಆದರೆ ಇಲ್ಲಿ ಮುಖ್ಯವಾದುದು ಇವರಿಬ್ಬರ ನಡುವೆ ಇದ್ದ ವೈಮನಸ್ಯ. ಏಕೆಂದರೆ ಈ ರಾಜಕೀಯ ವೈಮನಸ್ಯ ಅವರ ಅನುಯಾಯಿ ಗಳಲ್ಲೂ ಮುಂದುವರೆದು ಏಕೀಕರಣ ವಿಚಾರದಲ್ಲೂ ಕಾಣಿಸಿಕೊಂಡಿತ್ತು. ಮೈಸೂರಿನ ಕಾಂಗ್ರೆಸ್ ಶಾಸಕರು ಕೇಂದ್ರದಲ್ಲಿನ ನಾಯಕತ್ವವನ್ನು ಒಲಿಸಿಕೊಳ್ಳುವತ್ತ ಗಮನಹರಿಸಿದ್ದ ರಿಂದ ಏಕೀಕರಣದ ಸಮಸ್ಯೆ ಅಷ್ಟು ಮುಖ್ಯ ಅನ್ನಿಸಿರಲಿಲ್ಲ. ಕೆಂಗಲ್ಲರ ಏಕೀಕರಣದ ತುಡಿತ ಬೇರೆಯವರಲ್ಲಿ ಇರಲಿಲ್ಲ. ಇದಕ್ಕೆ ಕಾರಣ ಇಲ್ಲಿನ ಶಾಸಕರು ಕೇಂದ್ರದ ಅದರಲ್ಲೂ ನೆಹರು ಅವರ ತೀರ್ಮಾನವೇ ಏಕೀಕರಣಕ್ಕೆ ಅಂತಿಮವೆಂದು ಭಾವಿಸಿದ್ದು. ಈ ನಿಟ್ಟಿನಲ್ಲಿ ತಮ್ಮ ನಿಷ್ಠೆಯನ್ನೂ ವ್ಯಕ್ತಪಡಿಸಿದ್ದು ಉಂಟು. ಅಂದರೆ

ಕೆ.ಸಿ. ರೆಡ್ಡಿ ಅವರಿಗೆ ಬೆಂಬಲ ಸೂಚಿಸಿ ಕೆಂಗಲ್ಲರನ್ನು, ಏಕೀಕರಣವನ್ನು ಕಡೆಗಣಿಸಿದ್ದರು. ಈ ಸಂದರ್ಭದಲ್ಲಿ ಮನವಿ, ಅಭಿಪ್ರಾಯ ರೂಢನೆ, ನಿರ್ಣಯ-ಗೊತ್ತುವಳಿಗಳು, ಅಂಗೀಕಾರ ಮೊದಲಾದ ಪ್ರಕ್ರಿಯೆಗಳಿಂದ ಏಕೀಕರಣ ಸಾಧ್ಯ ಇಲ್ಲ ಎಂಬುದು ಜನರ ಅರಿವಿಗೆ ಬಂದಿತು. **ಮುನವಳ್ಳಿ, ಹೊಸಮನಿ ಸಿದ್ದಪ್ಪ** ಮೊದಲಾದವರೊಂದಿಗೆ ಸೇರಿಕೊಂಡಿದ್ದ 'ಕಮ್ಯುನಿಸ್ಟ್ ಪಕ್ಷ', ಭಿನ್ನ ರೀತಿಯಲ್ಲಿ ಚಳವಳಿ ಹೂಡಲು ಯೋಜಿಸುತ್ತಿತ್ತು. ಈ ಮಧ್ಯೆ ನೆಹರು ಅವರೊಂದಿಗೆ ಏಕೀಕರಣವನ್ನು ಪ್ರಸ್ತಾಪಿಸಲು ಹೋಗಿದ್ದ ಕಾಂಗ್ರೇಸ್ ಧುರೀಣರು ಬರಿಗೈಯಲ್ಲಿ ವಾಪಾಸಾದದ್ದು ಜನರನ್ನು ಇನ್ನಷ್ಟು ಕುಪಿತರನ್ನಾಗಿಸಿತ್ತು.

ಆಂಧ್ರದ ಏಕೀಕರಣ ವಿಚಾರದಲ್ಲೂ ಇದೇ ನಿಲುವುಗಳನ್ನು ತೆಗೆದುಕೊಂಡಿದ್ದ ಕಾಂಗ್ರೇಸಿಗರು ತೀವ್ರ ಪ್ರತಿಭಟನೆಗೆ ಗುರಿಯಾಗಿದ್ದರು. ಬೇಸತ್ತ ಆಂಧ್ರ ಚಳವಳಿಗಾರ **ಪೊಟ್ಟಿ ಶ್ರೀರಾಮುಲು** ಅವರು ೧೯.೧೦.೧೯೫೨ ರಂದು ಉಪವಾಸ ಸತ್ಯಾಗ್ರಹವನ್ನು ಆರಂಭಿಸಿಬಿಟ್ಟರು. ಕನ್ನಡಿಗರಲ್ಲಿ ಆದಂತಾಯೇ ಅಲ್ಲಿಯೂ 'ಎರಡು ಆಂಧ್ರಗಳು ರಚನೆ ಆಗಲಿ' ಎಂಬ ಚಿಂತನೆಗಳು ಹುಟ್ಟಿಕೊಂಡವು. ಅಂದರೆ ನೆಲ್ಲೂರು, ರಾಯಲ ಸೀಮೆಯ ಜನ ತೆಲುಗು ಮಾತನಾಡುವ ಪ್ರದೇಶಗಳನ್ನೊಳಗೊಂಡಂತೆ ಮದ್ರಾಸ್ ರಾಜಧಾನಿಯ ಆಂಧ್ರವನ್ನು ಅಪೇಕ್ಷಿಸಿದರು. ಇನ್ನೊಂದು ಬಣದವರು ಉಳಿದ ಪ್ರದೇಶಗಳನ್ನೊಳಗೊಂಡ ಆಂಧ್ರದ ರಚನೆ ಬಗ್ಗೆ ಒತ್ತಡ ತಂದರು.[೬] ಹೀಗಾಗಿ ಪರವಾದ ಹಾಗೂ ವಿರುದ್ಧವಾದ ಚಳವಳಿಗಳು ಆರಂಭಗೊಂಡಿದ್ದವು. ಮದರಾಸಿನಲ್ಲಿಯೆ ಜನಿಸಿದ್ದ ಶ್ರೀರಾಮುಲು ವಿಶಾಲಾಂಧ್ರದ ಸ್ಥಾಪನೆಗಾಗಿ ಉಪವಾಸ ಮುಂದುವರೆಸಿದ್ದರು. ಈ ಮಧ್ಯೆ **ಕೊಡಗಿನ** ಮುಖ್ಯಮಂತ್ರಿಗಳಾಗಿದ್ದ **ಸಿ.ಎಂ. ಪೂಣಚ್ಚ** ಅವರು ಏಕೀಕರಣ ಪರವಾಗಿ ಕೆಲಸ ಮಾಡಿದರೆ, ಕೊಡಗಿನಲ್ಲೆ ಅನೇಕರು ವಿರುದ್ಧವಾಗಿ ಕೆಲಸ ಮಾಡಿದ್ದು ಉಂಟು. ಮಹಾರಾಷ್ಟ್ರಿಗರು **ವೈ.ಬಿ. ಚವ್ಹಾನ್, ಬಿ.ಎಸ್. ಹಿರೇ** ಮೊದಲಾದವರ ನೇತೃತ್ವದಲ್ಲಿ **ಮಹಾರಾಷ್ಟ್ರ ಏಕೀಕರಣ ಪರಿಷತ್ತಿ**ನಡಿಯಲ್ಲಿಯೂ, ಗುಜರಾತಿಗಳು **ಗುಜರಾತ್ ನಿರ್ಮಾಣ್ ಪರಿಷತ್**ನ ಮೂಲಕವೂ, ಮಲೆಯಾಳಿಗಳು **ಕೇರಳ ಏಕೀಕರಣ ಸಭೆ**ಯಿಂದಲೂ ತಮ್ಮ ತಮ್ಮ ಚಳವಳಿಗಳನ್ನು ತೀವ್ರಗೊಳಿಸಿದ್ದರು.

ತೆಲುಗರಿಗೆ ಕನ್ನಡಿಗರ ರೀತಿಯಲ್ಲಿಯೇ ಬಹಳ ಗಾಢವಾದ ಭಾಷಿಕ ಚಳವಳಿಯ ಹಿನ್ನೆಲೆ ಇತ್ತು. ಇವರು ೧೯೧೩ ರಿಂದಲೂ 'ಆಂಧ್ರ ಮಹಾಸಭಾ'ದ ಮೂಲಕ

ಏಕೀಕರಣಕ್ಕಾಗಿ ಹೋರಾಡುತ್ತಿದ್ದರು. ೧೯೪೩ ರಲ್ಲಿ ಆಂಧ್ರ ಸಾರಸ್ವತ ಪರಿಷತ್‌ಸಂಘ ಸಂಘಟನೆ ಅಸ್ತಿತ್ವಕ್ಕೆ ಬಂದ ಮೇಲೆ ಚಳವಳಿಗೆ ಹೆಚ್ಚಿನ ಚಾಲನೆ ಬಂದಿತ್ತು. ಅಲ್ಲಿ ಕೊಂಡ ವೆಂಕಟಪ್ಪಯ್ಯ, ತಂಗಟೂರಿ ಪ್ರಕಾಶಂ, ಡಾ. ಬೋಗರಾಜ ಪಟ್ಟಾಭಿ ಸೀತರಾಮಯ್ಯ, ಶ್ರೀರಾಮುಲು ಮೊದಲಾದ ಧುರೀಣರು ಭಾಷಿಕ ಚಳವಳಿಯ ಮುಂಚೂಣಿಯಲ್ಲಿದ್ದರು.[೬೪] ಈ ಮಧ್ಯೆ ಪೊಟ್ಟಿ ಶ್ರೀರಾಮುಲು ಅವರು ಉಪವಾಸದಿಂದಾಗಿ ದಿನೇ ದಿನೇ ಸೊರಗುತ್ತಿದ್ದುದು ಜನರನ್ನು ಭಾವುಕರನ್ನಾಗಿಸಿತ್ತು. ಉಗ್ರವಾದ ಪ್ರತಿಭಟನೆಗಳು ಮೂಢಲಾರಂಭಿಸಿದ್ದವು. ಸುಮಾರು ಒಂದು ಕೋಟಿ ರೂಪಾಯಿಗಳಿಗೂ ಹೆಚ್ಚಿನ ಆಸ್ತಿ-ಪಾಸ್ತಿಗಳ ನಷ್ಟವುಂಟಾಯಿತು. ಶ್ರೀರಾಮುಲು ಹಾಗೂ ನೆಹರು ನಡುವಿನ ಸಂಧಾನಗಳು ಪ್ರಯೋಜನಕ್ಕೆ ಬರಲಿಲ್ಲ. ಯಾವುದಕ್ಕೂ ಒಪ್ಪದಿದ್ದ (ಆಂಧ್ರ ರಚನೆ ವಿಚಾರದಲ್ಲಿ ರಾಜಿಗೆ ಆಸ್ಪದ ನೀಡದ) ಶ್ರೀರಾಮುಲು ತಮ್ಮ ೫೮ ದಿನಗಳ ಉಪವಾಸದ ಆನಂತರ ೧೫.೧೨.೧೯೫೨ ರಂದು ನಿಧನ ಹೊಂದಿದರು. ಇದರಿಂದ ತೆಲುಗರು ಉದ್ವೇಗಿಗಳಾಗಬೇಕಾಯಿತು. ನೆಲ್ಲೂರು, ರಾಜಮಂಡ್ರಿ,ಅನಕಾಪಲ್ಲಿ ಮೊದಲಾದೆಡೆಗಳಲ್ಲಿ ಸಾವು-ನೋವುಗಳಾದವು. ಕೊನೆಗೆ ಪ್ರಧಾನಿ ನೆಹರು ೧೯.೧೨.೧೯೫೨ ರಂದು ಮದ್ರಾಸ್ ನಗರವನ್ನು ಹೊರತುಪಡಿಸಿ ಆಂಧ್ರ ರಾಜ್ಯ ರಚನೆ ಬಗ್ಗೆ ಒಪ್ಪಿಗೆ ನೀಡಿದರು. ಆದರೆ ಕಾಂಗ್ರೆಸಿನ ಆಡಳಿತಾವಧಿಯಲ್ಲಿಯೇ ಶ್ರೀರಾಮುಲು ಅವರ ದುರ್ಮರಣ ವಾದುದ್ದು ಜನರು ಕಾಂಗ್ರೆಸಿನ ಮೇಲೆ ನಂಬಿಕೆ ಕಳೆದುಕೊಳ್ಳುವಂತೆ (ಕರ್ನಾಟಕದಲ್ಲೂ) ಮಾಡಿತ್ತು. ಈ ಹಿನ್ನೆಲೆಯಲ್ಲಿಯೆ ಅಂಬೇಡ್ಕರ್ ಅವರು -

> "ಎಲ್ಲ ಕಾಂಗ್ರೆಸ್ಸಿಗರು ಒಪ್ಪಿಕೊಂಡಂಥ ಒಂದು ವಿಷಯಕ್ಕಾಗಿ ಶ್ರೀರಾಮುಲು ಅವರು ತಮ್ಮ ಜೀವ ಕೊಡಬೇಕಾಗಿ ಬಂದದ್ದು ಆಳುವ ಪಕ್ಷದ ಮೇಲೆ ಬರೆದ ಶೋಕ ಟಿಪ್ಪಣಿ ಇದ್ದಂತಿದೆ. ಆಂಧ್ರ ಪ್ರದೇಶವನ್ನು ನಿರ್ಮಿಸಬೇಕೆಂದು ಮಾಡಿದ ವಿಚಾರವು ಶ್ರೀರಾಮುಲು ಅವರ ಆತ್ಮಕ್ಕೆ ಪ್ರಧಾನಿ ಅವರು ಸಲ್ಲಿಸಿದ ಪಿಂಡದಾನವಿದ್ದಂತಿದೆ. ಇನ್ನಾವ ದೇಶದಲ್ಲಿ ಜನರು ಸರಕಾರದ ಇಂಥ ಕ್ರಮವನ್ನು ಸಹಿಸುತ್ತಿದ್ದರೆಂಬುದನ್ನು ಊಹಿಸಿ ಪ್ರಯೋಜನವಿಲ್ಲ."[೬೫]

- ಎಂದು ಮಾರ್ಮಿಕವಾಗಿ ನುಡಿದಿರುವುದು.

ಆಂಧ್ರದ ರಚನೆಗೆ ಒಪ್ಪಿಗೆ ನೀಡಿದ ದಿನದಂದೆ ಕೆ.ಎನ್. ವಾಂಚೂ ನೇತೃತ್ವದಲ್ಲಿ ಸಮಿತಿಯೊಂದನ್ನು ನೇಮಿಸಲಾಗಿತ್ತು. ಈ ಸಮಿತಿಯ ಕೆಲಸ ಆಂಧ್ರ ರಾಜ್ಯ ನಿರ್ಮಾಣವನ್ನು ಕುರಿತು ಸಮಗ್ರ ವರದಿ ನೀಡುವುದು. ಈ ಸಮಿತಿ ಕನ್ನಡಿಗರಿಗೆ ಮುಖ್ಯ ಆಗುವುದು ಬಳ್ಳಾರಿ ಜಿಲ್ಲೆಯ ಬಗ್ಗೆ ಇನ್ನೊಮ್ಮೆ ವಿಚಾರ ಮಾಡಲು ಆದೇಶಿಸಿದ್ದರಿಂದ. ಏಕೆಂದರೆ ಹಿಂದೊಮ್ಮೆ (೧೯೨೦ ರಲ್ಲಿ) ಕರ್ನಾಟಕ ಮತ್ತು ಆಂಧ್ರ ಪ್ರಾಂತೀಯ ಕಾಂಗ್ರೇಸ್ ಸಮಿತಿಗಳು ಬಳ್ಳಾರಿಗಾಗಿ ಕಿತ್ತಾಟ ನಡೆಸಿದ್ದವು. ಆಗ ರಾಷ್ಟ್ರೀಯ ಕಾಂಗ್ರೇಸ್ ಕೇಳ್ಕರ್ ಅವರ ಪಂಚಾಯಿತಿ ಸಮಿತಿಯನ್ನು (೧೯೨೧) ನೇಮಿಸಿತ್ತು. ಈ ಸಮಿತಿ ಆಲೂರು, ಅದವಾನಿ, ರಾಯದುರ್ಗಗಳನ್ನು ಆಂಧ್ರ ಪ್ರಾಂತೀಕ ಕಾಂಗ್ರೇಸಿಗೂ, ಬಳ್ಳಾರಿ ನಗರವನ್ನು ಒಳಗೊಂಡ ಉಳಿದ ತಾಲೂಕುಗಳನ್ನು ಕರ್ನಾಟಕ ಪ್ರಾಂತೀಯ ಕಾಂಗ್ರೇಸಿಗೂ ನೀಡಿತ್ತು. ಆದರೆ ಈ ಬಗೆಯ ಸಮಸ್ಯೆ ಪರಿಹಾರಗೊಂಡಿರಲಿಲ್ಲ. ಏಕೆಂದರೆ ಕನ್ನಡ ಭೂಪ್ರದೇಶಗಳೆಲ್ಲವನ್ನೂ ಕರ್ನಾಟಕಕ್ಕೆ ಸೇರಿಸಲು ಕನ್ನಡಿಗರು ೧೯೨೦ ರಿಂದಲೂ ಒತ್ತಾಯಿಸುತ್ತಲೇ ಇದ್ದರು. ಹೀಗಾಗಿ ವಾಂಚೂ ಸಮಿತಿ ಆಂಧ್ರ ರಚನೆಯ ಸಂದರ್ಭದಲ್ಲಿ ಬಳ್ಳಾರಿ ಸಮಸ್ಯೆಯನ್ನು ಪರಿಗಣನೆಗೆ ತೆಗೆದುಕೊಂಡು ೭.೨.೧೯೫೩ ರಂದು ತನ್ನ ವರದಿ ಒಪ್ಪಿಸಿತು. ಈ ವರದಿಯಲ್ಲಿ ವಾಂಚೂ ಅವರು -

> "ಹೀಗೆ ಮಾಡುವುದಕ್ಕೆ (ಬಳ್ಳಾರಿಯನ್ನು ತಾತ್ಕಾಲಿಕವಾಗಿ ಆಂಧ್ರದಲ್ಲಿರಿಸುವುದಕ್ಕೆ) ಬಳ್ಳಾರಿ ಜಿಲ್ಲೆಯ ಕನ್ನಡ ಭಾಷಾ ಪ್ರದೇಶಗಳ ಪ್ರಬಲ ವಿರೋಧವಿದೆ. ಕನ್ನಡ ಭಾಷೆಯನ್ನಾಡುವವರೆಲ್ಲರೂ ಇದಕ್ಕೆ ಸಂಪೂರ್ಣ ವಿರೋಧಿಗಳಾಗಿದ್ದರೆಂಬುದನ್ನು ನಾನು ಪುನರುಚ್ಚರಿಸು ತ್ತೇನೆ."[೬೬]

- ಎಂದು ಸ್ಪಷ್ಟಪಡಿಸಿದ್ದಾರೆ. ಇದರಿಂದಾಗಿಯೂ ಬಳ್ಳಾರಿಯ ಪ್ರಶ್ನೆ ಬಗೆಹರಿದಂತಾಗಲಿಲ್ಲ. ಬಳ್ಳಾರಿಯ ಸಮಸ್ಯೆಗೆ ಉತ್ತರದ ಕನ್ನಡಿಗರು ಪ್ರತಿಕ್ರಿಯಿಸಿದಷ್ಟು ಮೈಸೂರುವಾದಿಗಳು ಹಾಗೂ ಮೈಸೂರಿನ ಸರ್ಕಾರ ಪ್ರತಿಕ್ರಿಯಿಸಲಿಲ್ಲ. ಇಂಥ ಸಂದರ್ಭದಲ್ಲಿ ಶಾಂತವೇರಿ ಗೋಪಾಲಗೌಡರು ಶಾಸನ ಸಭೆಯಲ್ಲಿ 'ಮೈಸೂರು ಸರ್ಕಾರವು ಏಕೀಕರಣದ ಬಗ್ಗೆ ಉದ್ದೇಶಪೂರ್ವಕವಾಗಿ ಹಿಂದೇಟು ಹಾಕುತ್ತಿದೆ.' (೧೧.೩.೧೯೫೩ ರಂದು) ಎಂದು ಕಟುವಾಗಿ ಟೀಕಿಸಿದರು.[೬೭] ಇದು ಏಕೀಕರಣವಾದಿಗಳಿಗೆ ಸ್ವಲ್ಪಮಟ್ಟಿನ ಹುಮ್ಮಸ್ಸನ್ನು ಹೆಚ್ಚಿಸಿತ್ತು. ಇದಕ್ಕೂ ಮೊದಲು 'ಬಳ್ಳಾರಿ ಪ್ರಶ್ನೆ' ಹಾಗೂ ಆಂಧ್ರ ನಿರ್ಮಾಣದ

ಚಳವಳಿಗಳು ತೀವ್ರವಾಗಿ ಇರುವಾಗಲೇ ೧೯೫೩ ರ ಜನವರಿಯಲ್ಲಿ ಎ.ಐ.ಸಿ.ಸಿ.ಯು ಹೈದರಾಬಾದಿ (**ನಾನಾಲನಗರ**)ನಲ್ಲಿ ಅಧಿವೇಶನವನ್ನು ನಡೆಸಿತ್ತು. ಅದರಲ್ಲಿ ರಾಷ್ಟ್ರೀಯ ಕಾಂಗ್ರೇಸ್ "ಆಂಧ್ರ ರಚನೆಯನ್ನು ಹೊರತುಪಡಿಸಿ ಸದ್ಯಕ್ಕೆ ಇನ್ನಾವ ಪ್ರಾಂತ್ಯಗಳನ್ನು ರಚಿಸಲು ಸಾಧ್ಯ ಆಗುವುದಿಲ್ಲ" ಎಂಬ ನಿರ್ಣಯವನ್ನು ಅಂಗೀಕರಿಸಿತ್ತು. ಈ ಬಗೆಯ ಕಾಂಗ್ರೇಸಿನ ನಿಲುವು ಮೈಸೂರುವಾದಿಗಳನ್ನು ಹಾಗೂ ಉತ್ತರ ಕರ್ನಾಟಕದವರನ್ನು ಅಸಮಾಧಾನಕ್ಕೆ ಈಡು ಮಾಡದೆ ಇರಲಿಲ್ಲ. ಅಧಿವೇಶನಕ್ಕೆ ಹೋಗಿದ್ದ ಮುಖ್ಯಮಂತ್ರಿ **ಕೆಂಗಲ್ ಹನುಮಂತಯ್ಯ**ನವರು ವಿರೋಧ ವ್ಯಕ್ತಪಡಿಸಿದ್ದಲ್ಲದೆ **ಜೆ.ವಿ.ಪಿ. ವರದಿ**ಯನ್ನೂ ಖಂಡಿಸಿದ್ದರು. ಮೈಸೂರಿನೊಂದಿಗೆ ಎಲ್ಲ ಕನ್ನಡ ಪ್ರದೇಶಗಳು ಸೇರಲೇಬೇಕೆಂಬುದು ಇವರ ವಾದ.[೬೮] ಇದಕ್ಕೆ ಬೆಂಬಲವೋ ಎಂಬಂತೆ ಮೈಸೂರಿನ ಶಾಸನ ಮಂಡಲದ ಸದಸ್ಯರು ಉತ್ತರದ ಕನ್ನಡಿಗರಿಗೆ ತಾವು ಸಹ ಏಕೀಕರಣಕ್ಕೆ ಪರವಾಗಿರುವುದನ್ನು ತೋರಿಸಲು ಒಂದು ನಿಲುವನ್ನು ತೆಗೆದುಕೊಂಡಿದ್ದರು. ಅಂದರೆ ಐವತ್ತಾರು ಜನ ಸದಸ್ಯರು ಅಂದಿನ ಪ್ರಧಾನಿ **ನೆಹರು** ಅವರಿಗೆ ಪತ್ರವೊಂದನ್ನು ಬರೆದು ತಾವು ಸಹ (ಮೈಸೂರಿಗರು) ಏಕೀಕರಣಕ್ಕೆ ಹಾತೊರೆದಿರುವುದಾಗಿ ತಿಳಿಸಿದರು.[೬೯] ಆದರೆ ಯಾರೂ ಸಹ ರಾಜೀನಾಮೆ ಕೊಡುವ ವಿಚಾರವನ್ನೇ ಎತ್ತಿರಲಿಲ್ಲ. ಆ ಬಗೆಯ ಹೆಜ್ಜೆಯನ್ನು ಇಟ್ಟವರು ಮತ್ತೆ ಉತ್ತರ ಕರ್ನಾಟಕದ ಏಕೀಕರಣವಾದಿಗಳೇ ಆಗಿದ್ದಾರೆ. ಅಂದರೆ ಈ ಸನ್ನಿವೇಶದಲ್ಲಿ **ಅಂದಾನಪ್ಪ ದೊಡ್ಡಮೇಟಿ** ಅವರು ಕಾಂಗ್ರೇಸ್ಸಿನ ನಿಲುವನ್ನು ಖಂಡಿಸಿ **ಜಕ್ಕಲಿ**ಯಲ್ಲಿ ಉಪವಾಸಕ್ಕೆ ಕುಳಿತಿದ್ದರು. ಅಲ್ಲದೆ **ಮುಂಬಯಿ ವಿಧಾನಸಭೆ**ಯ ತಮ್ಮ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟಿದ್ದೂ ಉಂಟು. ಅಲ್ಲದೆ **ನಾರಾಯಣ ಪೈ, ತಲ್ಲೂರ ರಾಯನಗೌಡ ಪಾಟೀಲ** ಮೊದಲಾದವರು ಉಪವಾಸ ಕುಳಿತಿದ್ದರು. ಮೈಸೂರಿಗರಲ್ಲಿ ಕೆಂಗಲ್ಲರ ನಿಲುವು ಹಾಗೂ ಅವರ ಶಾಸಕರ ಏಕೀಕರಣ ಪರವಾದ ಪತ್ರವು ಉತ್ತರದವರಿಗೆ ಸ್ವಲ್ಪಮಟ್ಟಿನ ನಂಬಿಕೆಯನ್ನು ಉಳಿಸಿಕೊಳ್ಳುವಂತೆ ಮಾಡಿದುದರಲ್ಲಿ ಎರಡು ಮಾತಿಲ್ಲ. ಆದರೆ ಈ ಎರಡೂ ಕಡೆಯವರ ಮಾನಸಿಕವಾದ ಗಟ್ಟಿ ನಿಲುವುಗಳ ಬಗ್ಗೆ ಗ್ರಹಿಸುವುದು, ತುಲನೆ ಮಾಡುವುದು ಮುಖ್ಯವಾದ ಸಂಗತಿ. ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದವರೆ ದೃಢರು. ಏಕೆಂದರೆ ಮೈಸೂರಿಗರಾದ **ಎಸ್. ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ**ರಂಥವರು ಸಹ ಆರಂಭದಲ್ಲಿ ಏಕೀಕರಣದ ಬಗ್ಗೆ ದೃಢವಾಗಿ ಇರಲಿಲ್ಲ.[೭೦]

ಆಂಧ್ರ ನಿರ್ಮಾಣದ ಈ ಕಾಲಘಟ್ಟದಲ್ಲಿ ಪೊಟ್ಟಿ ಶ್ರೀರಾಮುಲು ಅವರ ಮರಣವು ಹೆಚ್ಚಿನ ಪ್ರಭಾವ ಬೀರಿತ್ತು. ಕನ್ನಡಿಗರಿಗೆ 'ಬಳ್ಳಾರಿ ಸಮಸ್ಯೆ'ಯ ಜೊತೆಗೆ ಏಕೀಕರಣಕ್ಕಾಗಿ

ಆಂಧ್ರಿಗರ ರೀತಿಯಲ್ಲಿ ಸಜ್ಜುಗೊಂಡು ಚಳವಳಿ ಹೂಡುವುದು ಅನಿವಾರ್ಯ ಆಗಿತ್ತು. ಈ ಹಿನ್ನೆಲೆಯಲ್ಲೂ ಉತ್ತರದವರ ಪ್ರಯತ್ನಗಳೇ ಮುಖ್ಯವಾದವು. ಹುಬ್ಬಳ್ಳಿಯಲ್ಲಿನ ಅದರಗುಂಚಿ ಶಂಕರಮಲ್ಲನ ಗೌಡ ಪಾಟೀಲರ ನಿಲುವು ಪೊಟ್ಟಿ ಶ್ರೀರಾಮುಲು ಅವರ ರೀತಿಯದೇ. ಇವರು ಏಕೀಕರಣದ ಆಶಯಕ್ಕಾಗಿ ೨೮.೩.೧೯೫೩ ರಿಂದ ಆಮರಣಾಂತ ಉಪವಾಸವನ್ನು ಆರಂಭಿಸಿಯೇ ಬಿಟ್ಟರು.[೭೧] ಕಾಂಗ್ರೇಸ್ಸಿನಿಂದಲೇ ಬೇಸತ್ತು ಕಾಂಗ್ರೇಸ್ಸಿಗ ಶಂಕರಗೌಡರು ತೆಗೆದುಕೊಂಡ ನಿರ್ಧಾರ ಕೆ.ಪಿ.ಸಿ.ಸಿ.ಯವರಿಗೆ ಯೋಚನೆ ಮಾಡುವಂಥದ್ದಾಗಿತ್ತು. ಪರಿಸ್ಥಿತಿ ಅತಿರೇಕಕ್ಕೆ ಹೋಗುವುದನ್ನು ತಪ್ಪಿಸಲು ಉಪವಾಸದ ಇಪ್ಪತ್ತ ಮೂರನೆಯ ದಿನ (೧೯.೪.೧೯೫೩ ರಂದು) ಕೆ.ಪಿ.ಸಿ.ಸಿ. ಹುಬ್ಬಳ್ಳಿಯಲ್ಲಿ ವಿಶೇಷವಾದ ಸಭೆ ಕರೆಯಿತು. ಆ ದಿನ ಏಕೀಕರಣದ ಚರಿತ್ರೆಯಲ್ಲಿ ತಿರುವನ್ನು ಕೊಟ್ಟ ದಿನವೂ ಹೌದು. ನೆಹರು ಬೆಂಬಲಿಗರು ಹುಬ್ಬಳ್ಳಿಗೆ ಆಗಮಿಸಿ ತಿಳಿ ವಾತಾವರಣವನ್ನು ಉಂಟುಮಾಡಲು ಯೋಜಿಸಿದ್ದರು. ಆದರೆ ಈ ಸನ್ನಿವೇಶದಲ್ಲಿ ಜನಸಾಮಾನ್ಯರ ನಿಲುವು ಭಿನ್ನ ರೀತಿಯದು. ಏಕೀಕರಣದ ಬಗೆಗಿನ ಜನರ ತಾಳ್ಮೆಯ ಪ್ರಶ್ನೆ ಅಂದು ನಿರ್ಧಾರವಾಗಲೇಬೇಕಿದ್ದ ನಿಟ್ಟಿನದು. ಸುಮಾರು ಇಪ್ಪತ್ತೈದು ಸಾವಿರಕ್ಕೂ ಹೆಚ್ಚಿನ ಜನರು 'ಕಮ್ಯುನಿಸ್ಟ್ ಪಕ್ಷ'ದ ಎ.ಜೆ. ಮುಧೋಳ, ಸಿದ್ಧಪ್ಪ ಕಮ್ಮಾರ, ಎನ್.ಕೆ. ಉಪಾಧ್ಯಾಯ, ಸಿ.ಜಿ. ಪಾಟೀಲ, ತಡಸದ ಮಠ ಮೊದಲಾದವರ ನೇತೃತ್ವದಲ್ಲಿ ಸಭೆ ನಡೆಯುತ್ತಿದ್ದ ಪುರಭವನದೊಳಕ್ಕೆ ನುಗ್ಗಿದರು. ಕಾಂಗ್ರೇಸ್ಸಿಗರ ಮೇಲೆ ಚಪ್ಪಲಿಗಳನ್ನು ಎಸೆದು ಗಲಾಟೆ ಮಾಡಲಾಯಿತು. ಅಂದಿನ ಕೆ.ಪಿ.ಸಿ.ಸಿ. ಅಧ್ಯಕ್ಷ ಎಸ್. ನಿಜಲಿಂಗಪ್ಪ ಅವರಿಗೆ ಬಳೆಗಳನ್ನು ತೊಡಿಸಿ ಅರಿಶಿನ-ಕುಂಕುಮಗಳನ್ನು ಹಚ್ಚಿದರು. ಎಸ್.ಆರ್. ಕಂಠಿ ಅವರ ಅಂಗಿಯನ್ನು ಹರಿದರು. ಅಷ್ಟೇ ಅಲ್ಲದೆ ಅವರುಗಳಿಂದ ಒತ್ತಾಯ ಪೂರ್ವಕವಾಗಿ ರಾಜೀನಾಮೆಗಳನ್ನು ಪಡೆಯಲಾಯಿತು. ಗುದ್ಲೆಪ್ಪ ಹಳ್ಳಿಕೇರಿ ಅವರು ಶಂಕರಗೌಡರಿಗೆ ಉಪವಾಸವನ್ನು ನಿಲ್ಲಿಸಲು ಕೇಳಿಕೊಂಡರು. ಸಿಟ್ಟಿಗೆದ್ದಿದ್ದ ಜನಸಮೂಹ ಇವರ ಕಾರಿಗೆ ಬೆಂಕಿ ಹಚ್ಚಿತು. ಇದೇ ಸಂದರ್ಭದಲ್ಲಿ ಜಯದೇವಿತಾಯಿ ಲಿಗಾಡೆ ಅವರು ಗಡಿನಾಡಿನ ಕನ್ನಡಿಗರನ್ನು ಸಜ್ಜುಗೊಳಿಸುತ್ತ ಶಂಕರಗೌಡರಿಗೆ 'ಏಕೀಕರಣಕ್ಕೆ ನಾವು ನೀವು ಸೇರಿ ಹೋರಾಡೋಣ' ಎಂಬ ತಮ್ಮ ರಕ್ತಾಂಕಿತ ಸಹಿಯ ಕಾಗದವನ್ನು ಬರೆದು ಬೆಂಬಲವಿತ್ತಿದ್ದರು.[೭೨] ಹುಬ್ಬಳ್ಳಿಯಲ್ಲಿ ಉದ್ರಿಕ್ತ ಜನ ಆಸ್ತಿ-ಪಾಸ್ತಿಗಳನ್ನು ಧ್ವಂಸ ಮಾಡಲು ಹೊರಟದ್ದರಿಂದ ಲಾಠಿಚಾರ್ಜು-ಗೋಲಿಬಾರುಗಳಿಗೆ ಆಜ್ಞೆ ನೀಡಲಾಗಿತ್ತು. ಜನಸಂದಣಿ ನಿಯಂತ್ರಣಕ್ಕೆ

ಬಾರದೆ ಕಾಂಗ್ರೆಸ್ ಧುರೀಣರ ವಾಹನಗಳಿಗೆ, ಹುಲ್ಲಿನ ಬಂಡಿಗಳಿಗೆ ಬೆಂಕಿ ಹಚ್ಚಿತು.[೨೩] ಸರ್ಕಾರ ವಿವಿಧ ಕನ್ನಡ ಪ್ರದೇಶಗಳಿಂದ ಬಂದಿದ್ದ ಕಮ್ಯುನಿಸ್ಟ್ ನಾಯಕರುಗಳನ್ನು ಬಂಧಿಸಿ ಈ ಘಟನೆಗೆ ಕಾರಣರನ್ನಾಗಿಸಿತು. ಇವರೆಲ್ಲರ ಮೇಲೆ ಖಟ್ಲೆಗಳನ್ನು ಹೂಡಿದ್ದುದರಿಂದ ಎಸ್.ಆರ್. ಬೊಮ್ಮಾಯಿ ಅವರು ವಕಾಲತ್ತು ವಹಿಸಿದ್ದರು.

'ಬಳ್ಳಾರಿಯ ಪ್ರಶ್ನೆ' ಬಗೆಹರಿಯದೆ ಇದ್ದದ್ದು, ತೆಲುಗರು ಹಾಗೂ ಕನ್ನಡಿಗರು ಈ ಬಗ್ಗೆ ಪೈಪ್ರೋಟಿ ನಡೆಸುತ್ತಿದ್ದುದನ್ನು ಗಮನಿಸಿದ ರಾಷ್ಟ್ರಪತಿಗಳು ಒಂದು ಆಯೋಗವನ್ನು (೨೧.೪.೧೯೫೩ ರಂದು) ರಚಿಸಿದರು. ಇದೇ ಎಲ್.ಎಸ್. ಮಿಶ್ರಾ ಆಯೋಗ. ಈ ಆಯೋಗ ವಾಂಚೂ ವರದಿಯನ್ನು ಹಿನ್ನೆಲೆಯಾಗಿ ಇಟ್ಟುಕೊಂಡು ೧೮.೫.೧೯೫೩ ರಂದು ತನ್ನ ವರದಿಯನ್ನು ಪ್ರಕಟಿಸಿತು. ಅದರಲ್ಲಿ "ಕನ್ನಡ ಪ್ರದೇಶವಾದ ಬಳ್ಳಾರಿಯು ಮೈಸೂರು ಪ್ರಾಂತ್ಯಕ್ಕೆ ಸೇರುವುದು ಉಚಿತ" ಎನ್ನಲಾಗಿತ್ತು. ಆದರೆ ಈ ಬಗ್ಗೆ ಆಂಧ್ರಿಗರು ತಕರಾರು ತೆಗೆಯದೆ ಬಿಡಲಿಲ್ಲ. ಬಳ್ಳಾರಿಯಲ್ಲೂ ತೆಲುಗು ಮಾತನಾಡುವ ಜನರು ಕನ್ನಡಿಗರ ಮೇಲೆ ಹಲ್ಲೆ ಮಾಡತೊಡಗಿದ್ದರು. ಇಂಥ ಹಿಂಸಾತ್ಮಕ ವಾತಾವರಣ ವನ್ನು ನೆನಪಿಸಿ ಕೊಂಡಿರುವ ಗೋಪಾಲಗೌಡರು ಬಳ್ಳಾರಿಗೆ ತಾವು ಭೇಟಿಯಿತ್ತಾಗ ಕಂಡುಬಂದ 'ರಕ್ತಪಾತ ಮಾವುತುಂದಿ' (ರಕ್ತಪಾತವಾಗುತ್ತದೆ) ಎಂಬ ತೆಲುಗಿನ ಹೇಳಿಕೆಗಳನ್ನು ಬರೆದಿದ್ದುದನ್ನು ಖಂಡಿಸಿದ್ದಾರೆ. ಅಲ್ಲದೆ ಶಾಸನಸಭೆಯಲ್ಲಿ (೨೩.೭.೧೯೫೩ ರಂದು) ಭಾಷಿಕ ಅತಿರೇಕ ಗಳನ್ನು, ಸಂಕುಚಿತ ಧೋರಣೆಗಳನ್ನು ಗಮನದಲ್ಲಿಟ್ಟುಕೊಂಡು -

> "ಬಳ್ಳಾರಿ ತಾಲ್ಲೂಕು ಇನ್ನೂ ಎಲ್ಲಿಗೆ ಸೇರಬೇಕೆಂಬುದು ನಿರ್ದಿಷ್ಟವಾಗಿ ತೀರ್ಮಾನವಾಗಿಲ್ಲ, ಮಿಶ್ರಾ ವರದಿ ಕೇವಲ ಒಂದು ವರದಿಯೇ ಹೊರತು, ಅದು ಕೊನೆಯ ತೀರ್ಮಾನವಲ್ಲ. ಅದು ಅವಾರ್ಡ್ ಅಲ್ಲ. ಅವರು ಅನ್ಯಾಯ ಮಾಡಿದ್ದಾರೆ ಎಂದು ಹೇಳುವವರೂ ಇದ್ದಾರೆ. ಬಳ್ಳಾರಿ ಆಂಧ್ರಕ್ಕೆ ಸೇರಬೇಕೆಂದು ಹಠಹಿಡಿದಿರುವವರೂ ಇದ್ದಾರೆ."[೨೪]

- ಎಂಬುದಾಗಿ ಹೇಳಿ ಎಲ್ಲ ಜನರ ಹಿತದ ಬಗ್ಗೆ ಗಮನ ಸೆಳೆದಿದ್ದಾರೆ. ಈ ಸಂದರ್ಭದಲ್ಲಿ ಬಳ್ಳಾರಿಯ ತೆಲುಗರು ಮಾಡಿದ ಅನಾಚಾರಗಳ ಬಗ್ಗೆ, ದೌರ್ಜನ್ಯದ ಬಗ್ಗೆ ಶತಾಯುಷಿ ಏಕೀಕರಣ ಚಂದ್ರಶೇಖರ ಶಾಸ್ತ್ರಿ (ಮಾಗಳ), ಬೆಲ್ಲದ ಚನ್ನಪ್ಪ

(ಹೊಸಪೇಟೆ) ಅವರುಗಳು ನೆನಪು ಮಾಡಿಕೊಂಡಿದ್ದಾರೆ.[೭೫] ಗೋಪಾಲಗೌಡರ ಉದಾರವಾದ ಚಿಂತನೆಯ ರೀತಿಯಲ್ಲಿಯೇ ಆಲೋಚನೆ ಮಾಡಿದ್ದ ಅಂದಿನ ಆಂಧ್ರ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ನೀಲಂ ಸಂಜೀವ ರೆಡ್ಡಿ, ಉಪಾಧ್ಯಕ್ಷರಾಗಿದ್ದ ಎ. ಕಾಳೇಶ್ವರರಾವ್ ಅವರುಗಳು ಕನ್ನಡಿಗರೊಂದಿಗೆ ಜಗಳ ಮಾಡುವುದು ಸರಿ ಅಲ್ಲ ಎಂಬ ಹೇಳಿಕೆಗಳನ್ನು ನೀಡಿವರು. ಅಲ್ಲದೆ ತೆಲುಗರು ಬಳ್ಳಾರಿಯನ್ನು ತೊರೆದು ಆಂಧ್ರದ ಭಾಗಗಳಿಗೆ ಸ್ಥಳಾಂತರ ಆಗುವುದರ ಬಗ್ಗೆ ಮನವೊಲಿಸಿದ್ದು ಉಂಟು. ಈ ಮಧ್ಯೆ ಪ್ರಧಾನಿ ನೆಹರು ಅವರು ಬಳ್ಳಾರಿಯ ಕರ್ನಾಟಕ ಏಕೀಕರಣ ಕ್ರಿಯಾ ಸಮಿತಿಗೆ ೭ ರ ಆಗಸ್ಟ್ ೧೯೫೩ ರಂದು ಸರ್ಕಾರ ಮಿಶ್ರಾ ವರದಿಯನ್ನು ಒಪ್ಪಿರುವುದಾಗಿ ತಿಳಿಸಿದರು. ಕ್ರಿಯಾ ಸಮಿತಿಯ ಅಧ್ಯಕ್ಷ ಜಂತಕಲ್ಲು ಗಾದಿಲಿಂಗಪ್ಪ ಕಾರ್ಯದರ್ಶಿ ಕೋ. ಚೆನ್ನಬಸಪ್ಪ, ಗಡಿಗಿ ಮರಿಸ್ವಾಮಪ್ಪ, ಲಿಂಗಣ್ಣ, ಅಲ್ಲಂ ಕರಿಬಸಪ್ಪ, ಅಳವಂಡಿ ಶಿವಮೂರ್ತಿಸ್ವಾಮಿ, ರೇವಣ್ಣಸಿದ್ದಯ್ಯ ಮೊದಲಾದವರು ಮಾಡಿದ ಪ್ರಯತ್ನಗಳು ಗಮನಾರ್ಹ. ಇವರುಗಳು, ಮೈಸೂರುವಾದಿ ಗಳು ಬಳ್ಳಾರಿಯನ್ನು ಮೈಸೂರು ಪ್ರಾಂತ್ಯದಲ್ಲಿ ಸೇರಿಸಿಕೊಳ್ಳಲು ಹಿಂಜರಿಯುತ್ತಿದ್ದುದನ್ನು ಗಮನಿಸಿ ಅವರುಗಳ ಮನವೊಲಿಸಲಾರಂಭಿಸಿದ್ದರು. ವಾಂಚೂ ವರದಿ ಹಾಗೂ ಮಿಶ್ರಾ ವರದಿಗಳನ್ವಯ ಆಂಧ್ರ ರಾಜ್ಯ ನಿರ್ಮಾಣದ ವಿಧೇಯಕಕ್ಕೆ ರಾಷ್ಟ್ರಪತಿಗಳು ತಮ್ಮ ಒಪ್ಪಿಗೆ (೧೪ರ ಸೆಪ್ಟೆಂಬರ್ ೧೯೫೩ ರಂದು) ನೀಡಿದರು. ಅದರಂತೆ ೧ರ ಅಕ್ಟೋಬರ್ ೧೯೫೩ ರಂದು ವಿಶಾಲಾಂಧ್ರ ಪ್ರದೇಶವು ಸೇರಿಕೊಂಡವು. ಇದರಿಂದ ಏಕೀಕರಣದ ಬಗೆಗೆ ಚಳವಳಿಗಾರರಲ್ಲಿ ಮತ್ತಷ್ಟು ತೀವ್ರವಾಗುವ ಹುಮ್ಮಸ್ಸು ಬಂದಿತು. ಬಳ್ಳಾರಿಯು ಕನ್ನಡಿಗರ ಕೈಸೇರಿದುದರಲ್ಲಿ, ಏಕೀಕರಣದ ಹೋರಾಟದಲ್ಲಿ ಬಳ್ಳಾರಿ ವೀರಶೈವ ವಿದ್ಯಾವರ್ಧಕ ಸಂಘದ ಪಾತ್ರ ಹಿರಿದು. ಅಲ್ಲದೆ ಅನೇಕ ಸಂಘಟನೆಗಳು, ಸಾಂಸ್ಕೃತಿಕ ಸಂಸ್ಥೆಗಳು ಮುಖ್ಯವಾಗಿ 'ವ್ಯಾಯಾಮ ಶಾಲೆ'ಗಳು ಈ ಹಿನ್ನೆಲೆಯಲ್ಲಿ ದುಡಿದಿವೆ. ಟೇಕೂರು ಕೃಷ್ಣಮೂರ್ತಿ, ಟಿ.ಎಚ್.ಎಂ. ಶ್ರೀಕಂಠಯ್ಯ, ವಿಠೋಬ ಶೆಟ್ಟಿ, ಎಂ.ಎಚ್.ಎಂ. ಗುರುಶಂಕರಯ್ಯ, ಡಾ. ನಾಗನಗೌಡ, ಹೆಚ್. ಬಸಣ್ಣ, ಪತ್ತಿಗೊಂಡ ಗುರುನಾಥಪ್ಪ, ಎಲಿಗಾರ ತಿಮ್ಮಪ್ಪ, ಟೇಕೂರು ಸುಬ್ರಮಣ್ಯಂ, ಶೇಷಗಿರಿ ಆಚಾರ್, ನೆಲ್‌ಕುದರ ಕೊಟ್ರಪ್ಪ, ಕೊಟ್ರಪ್ಪಜ್ಜ, ಸದ್ಯೋಜಾತ, ಮರಿಸ್ವಾಮಿ ಪಾಟೀಲ, ಜ್ಯೋತಿ ಶಿವಲಿಂಗಪ್ಪ, ಬಿ.ಎಸ್. ವೀರಭದ್ರಪ್ಪ, ಪಂಚಾಕ್ಷರಪ್ಪ, ಶಾಂತರುದ್ರಪ್ಪ, ಮಠದ ಪಾಟೀಲ ಮೊದಲಾದವರು ಏಕೀಕರಣಕ್ಕಾಗಿ ಹಾಗೂ ಬಳ್ಳಾರಿಯನ್ನು ಕರ್ನಾಟಕ

ದಲ್ಲಿ ಸೇರಿಸಲು ದುಡಿದಿದ್ದಾರೆ. ದುಃಖದ ಸಂಗತಿಯೆಂದರೆ ಬಳ್ಳಾರಿ-ಮೈಸೂರುಗಳ ಮಿಲನದ ಹಿಂದಿನ ರಾತ್ರಿ (೩೦.೯.೫೩) ಕನ್ನಡ ಪ್ರೇಮಿ **ರಂಜಾನ್ ಸಾಹೇಬ್** ಅವರು ದುಷ್ಕರ್ಮಿಗಳ ಆಸಿಡ್ ಬಲ್ಬನಿಂದಾಗಿ ಏಕೀಕರಣಕ್ಕೆ ಬಲಿ ಆದದ್ದು.

ಕೇಂದ್ರದಲ್ಲಿನ ಕಾಂಗ್ರೇಸ್ ಸರ್ಕಾರವು 'ಬಳ್ಳಾರಿ ಪ್ರಶ್ನೆ' ಅಥವಾ ಆಂಧ್ರ ನಿರ್ಮಾಣದ ಅನಂತರ ಕರ್ನಾಟಕದ ಬಗ್ಗೆ ಮತ್ತೆ ಮೌನ ತಾಳಿತು. ಇದರಿಂದಾಗಿ ಕನ್ನಡ ಪ್ರದೇಶಗಳಲ್ಲಿನ ಕಾಂಗ್ರೇಸ್ ಧುರೀಣರು ಏಕೀಕರಣದ ವಿಷಯವಾಗಿ ಜನಮನ್ನಣೆ ಕಳೆದುಕೊಂಡಿದ್ದರು. ಆದರೆ ಚುನಾವಣೆಗಳು ಹತ್ತಿರವಾಗುತ್ತಿದ್ದುದರಿಂದ ಕಾಂಗ್ರೇಸ್ ಆರಿಸಿ ಬರಲು ಜನ ಬೆಂಬಲ ಬೇಕೆ ಬೇಕಿತ್ತು. ಜನ ಅಸಮಾಧಾನದ ಬಗ್ಗೆ ಸರ್ಕಾರದ ಗಮನಸೆಳೆಯಲು ಕೆ.ಪಿ.ಸಿ.ಸಿ. ಸದಸ್ಯರು ಪ್ರಯತ್ನಿಸಿದರು. ಅಂದರೆ ೧೯೫೪ರ ಅಂತ್ಯದ ವೇಳೆಗೆ ಕರ್ನಾಟಕ ರಾಜ್ಯ ನಿರ್ಮಾಣ ಮಾಡಬೇಕೆಂದೂ, ಈ ಕುರಿತು ಅಕ್ಟೋಬರ್ ೧೯೫೩ ರೊಳಗಾಗಿ ತನ್ನ ನಿಶ್ಚಿತ ಅಭಿಪ್ರಾಯವನ್ನು ಪ್ರಕಟಿಸಬೇಕೆಂದು ನಿರ್ಣಯಿಸಿ ಒತ್ತಡ ತರಲಾರಂಭಿಸಿದ್ದರು. ಅಕ್ಟೋಬರ್ ಒಳಗಾಗಿ ಬೇಡಿಕೆಗಳು ಪೂರೈಕೆ ಆಗದಿದ್ದಲ್ಲಿ ಕೇಂದ್ರ ಹಾಗೂ ಪ್ರಾಂತ್ಯಗಳಲ್ಲಿನ 'ಎಲ್ಲ ಕನ್ನಡ ಶಾಸಕರು ರಾಜೀನಾಮೆ ನೀಡುವುದು ಉಚಿತ'ವೆಂದು ನಿರ್ಧರಿಸಲಾಗಿತ್ತು. ಕಾಂಗ್ರೇಸ್ಸಿಗರ ಈ ರೀತಿಯ ನಿರ್ಧಾರಗಳಿಂದ ಜನರು ಮತ್ತೆ ಮಾರುಹೋಗಲು ಸಿದ್ಧರಿರಲಿಲ್ಲ. ಇದರ ಪರಿಣಾಮವೇ ಉಪ ಚುನಾವಣೆಯಲ್ಲಿ ಮುಂಬಯಿ-ಕರ್ನಾಟಕದ ಕಾಂಗ್ರೇಸ್ಸಿಗರು ಸೋಲನ್ನು ಅನುಭವಿಸಿದ್ದು. ಅಲ್ಲದೆ ಹುಬ್ಬಳ್ಳಿಯಿಂದ ಆರಿಸಿಹೋಗಿದ್ದ **ದುಂದೂರ** ಅವರ ನಿಧನದಿಂದ ತೆರವಾದ ಸ್ಥಾನಕ್ಕೆ ಮೊದಲ ಭಾರಿಗೆ ಏಕೀಕರಣ ಸಮಿತಿಯ **ಅಂದಾನಪ್ಪ ಕಂಬಳಿ** ಅವರು ಆರಿಸಿ ಬಂದದ್ದು. ಇಂಥ ಪರಿಣಾಮಗಳು ಕಾಂಗ್ರೇಸ್ಸಿಗರ ಮುಖಭಂಗವನ್ನುಂಟು ಮಾಡಿದ್ದವು. ಏಕೀಕರಣವಾದಿಗಳು ಕಾಂಗ್ರೇಸ್ ಸಭೆಗಳಿಗೆ ತೊಂದರೆಗಳನ್ನು ಒಡ್ಡಲಾರಂಭಿಸಿದ್ದರು.

ಸಾರ್ವತ್ರಿಕ ಚುನಾವಣೆಗಳ ಅನಂತರ (೧೯೫೭ರ ತರುವಾಯ) ಕಾಂಗ್ರೇಸ್ಸೇತರ ರಾಜಕೀಯ ಪಕ್ಷಗಳು ಏಕೀಕರಣದ ಆಶಯಕ್ಕಾಗಿ **ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು** (ಅಕರಾನಿ ಪರಿಷತ್ತು) ಎಂಬ ಹೊಸ ಪಕ್ಷವನ್ನು ಕಟ್ಟಿಕೊಂಡಿದ್ದವು. ಇದರ ಮೊದಲ ಅಧಿವೇಶನವು **೨೮.೫.೧೯೫೩** ರಂದು **ದಾವಣಗೆರೆಯಲ್ಲಿ** ನೆರವೇರಿತ್ತು. ಏಕೀಕರಣ ಸಮಿತಿಯವರೆಲ್ಲ ಹೀಗೆ 'ಅಕರಾನಿ ಪರಿಷತ್ತಿ'ನಡಿಯಲ್ಲಿ ಒಂದುಗೂಡಿದ್ದು ಈ ಚಿಂತನೆಗೆ ಹೆಚ್ಚಿನ ಮಹತ್ವ ತಂದು ಕೊಡಲು ಕಾರಣವಾಗಿದ್ದಿತು. ಅಧಿವೇಶನದ

ಉದ್ಘಾಟಕರಾಗಿದ್ದ ಅಳವಂಡಿ ಶಿವಮೂರ್ತಿ ಸ್ವಾಮಿಗಳು, ಅಕರಾನಿ ಪರಿಷತ್ತಿನ ಅಧ್ಯಕ್ಷರಾಗಿದ್ದ **ಕೆ.ಆರ್. ಕಾರಂತ್**, ಕಾರ್ಯದರ್ಶಿಗಳಾಗಿದ್ದ **ಬಿ.ವಿ. ಕಕ್ಕಿಲ್ಲಾಯ**ರು ಹಾಗೂ ಉಪಾಧ್ಯಕ್ಷರಾಗಿದ್ದ **ಗೋಪಾಲಗೌಡ** ಅವರುಗಳು 'ಸಮಾಜವಾದಿ ಚಿಂತನೆ'ಗಳಿಂದ ಜನರ ಭಾವನೆಗಳಿಗೆ ಹತ್ತಿರವಾಗಿದ್ದರು. ಇದರಿಂದ ಕಾಂಗ್ರೇಸ್ ಧುರೀಣರು ವಿಚಲಿತರಾಗದೆ ಇರಲಿಲ್ಲ. 'ಅಕರಾನಿ ಪರಿಷತ್ತಿ'ನವರು ಏಕೀಕರಣದ ಆಶಯಗಳನ್ನು ಸಾಕಾರಗೊಳಿಸಿಕೊಳ್ಳಲು ಕನ್ನಡ ಪ್ರದೇಶ ಗಳೆಲ್ಲವನ್ನೂ ಸಂಘಟನಾ ಸಾಮರ್ಥ್ಯಕ್ಕೆ ಒಳಗು ಮಾಡಿಕೊಂಡಿದ್ದರು. ಅಲ್ಲದೆ ಪರಿಷತ್ತು ೯.೮.೧೯೫೩ ರಿಂದ ಒಂದು ವಾರವನ್ನು ಏಕೀಕರಣಕ್ಕಾಗಿ **ಹೋರಾಟದ ವಾರ** (ಕರ್ನಾಟಕ ವಾರ)ವನ್ನಾಗಿ ಆಚರಿಸಲು ಕರೆ ನೀಡಿತ್ತು. ಭಿನ್ನ ರೀತಿಯಲ್ಲಿ ಹೋರಾಟ ನಡೆಸುವುದಾಗಿ ಹೇಳಿ ಕೊಂಡಿದ್ದುದರಿಂದ ಮುಂಬಯಿ ಸರ್ಕಾರ ಮುಂಜಾಗ್ರತಾ ಕ್ರಮಗಳನ್ನು ತೆಗೆದು ಕೊಳ್ಳಬೇಕಾಯಿತು. ಈ ಹಿನ್ನೆಲೆಯಲ್ಲಿ ಸುಮಾರು ಐದು ಸಾವಿರಕ್ಕೂ ಹೆಚ್ಚಿನ ಜನರನ್ನು, ನಾಯಕರನ್ನು ಬಂಧಿಸಿ **ಹಿಂಡಲಗಿ, ಅಹಮದಾಬಾದ್, ನಾಸಿಕ್, ಎರವಾಡ, ಬರೋಡ** ಮೊದಲಾದ ಜೈಲುಗಳಿಗೆ ರವಾನಿಸಿತ್ತು. ಬಹುಪಾಲು ಕಮ್ಯುನಿಸ್ಟರೆ ಬಂಧಿತ ರಾಗಿದ್ದುದರಿಂದ ಕಮ್ಯುನಿಸ್ಟರ ಶಾಖೆಗಳು, ಮುಂಬಯಿ-ಕರ್ನಾಟಕದ ಕನ್ನಡ ಸಂಘಟನೆಗಳು ಹಾಗೂ ಜನರು ಬಿಡುಗಡೆಗೊಳಿಸಲು ಕ್ರಮಗಳನ್ನು ತೆಗೆದುಕೊಂಡಿದ್ದರು. ಅಂದರೆ ಜನಸಮುದಾಯವು ಈ ಸಂದರ್ಭದಲ್ಲಿ ತನ್ನನ್ನು ಹೆಚ್ಚಿನ ಸಂಖ್ಯೆಯಲ್ಲಿ ತೊಡಗಿಸಿಕೊಂಡಿದ್ದುದರಿಂದ ಅನೇಕ ವಿಧ್ವಂಸಕ ಕೃತ್ಯಗಳು ನಡೆದವು. ರೈಲ್ವೆ ಹಳಿಗಳನ್ನು ಕಿತ್ತುಹಾಕುವ, ದೂರವಾಣಿ ತಂತಿಗಳನ್ನು ಕತ್ತರಿಸುವ, ಹರತಾಳ, ಘೇರಾವೋ ಮೊದಲಾದ ಪ್ರತಿಭಟನೆಗಳನ್ನು ಚುರುಕುಗೊಳಿಸಿದ್ದರು. ಬಂಧಿತರ ಬಿಡುಗಡೆಗಾಗಿ ನ್ಯಾಯಾಲಯಗಳಲ್ಲಿ 'ಹೇಬಿಯಸ್ ಕಾರ್ಪಸ್' ಅರ್ಜಿಗಳನ್ನು ಸಲ್ಲಿಸಲಾಯಿತು. ಮುಂಬಯಿನ ಕಾಂಗ್ರೇಸ್ ಸರ್ಕಾರದ ಮುಖ್ಯಮಂತ್ರಿಗಳಾಗಿದ್ದ **ಮುರಾರ್ಜಿ ದೇಸಾಯಿ** ಅವರು ಕಮ್ಯುನಿಸ್ಟರ ಚಟುವಟಿಕೆಗಳ ಮೇಲೆ ತೀವ್ರ ನಿಗಾ ಇಡಲು ಕರೆ ಕೊಟ್ಟಿದ್ದರು. ಹುಬ್ಬಳ್ಳಿಯಂತು **ನ್ಯೂಯಾರ್ಕ್ ಟೈಂಸ್**ನಲ್ಲಿ ಈ ಬಗ್ಗೆ ಎರಡು ಕಾಲಂಗಳಲ್ಲಿ ಸುದ್ದಿ ಪ್ರಕಟವಾಗುವಷ್ಟು ಪರಿಣಾಮಕಾರಿ ಆಗಿತ್ತು. ಈ ಸಂದರ್ಭದಲ್ಲಿ ಪಾಟೀಲ ಪುಟ್ಟಪ್ಪನವರ ಏಕೀಕರಣದ ಕಾರ್ಯಗಳು ಗಮನಾರ್ಹವಾಗಿದ್ದವು.

ಹುಬ್ಬಳ್ಳಿಯ ಘಟನೆಗಳು, ಉಪ ಚುನಾವಣೆಗಳ ಫಲಿತಾಂಶ, ಕಮ್ಯುನಿಸ್ಟರ ಹಾವಳಿ ಮೊದಲಾದವುಗಳಿಂದ ಕನ್ನಡಿಗರು ಕೆ.ಪಿ.ಸಿ.ಸಿ.ಯ ಹಿಡಿತದಲ್ಲಿ ಇಲ್ಲ ಎಂಬುದು ನೆಪರು

ಮೊದಲಾದ ಧುರೀಣರಿಗೆ ಮನವರಿಕೆ ಆಗಿತ್ತು. ಕನ್ನಡಿಗರಂತೆಯೇ ಗುಜರಾತ್, ಕೇರಳ, ಮಹಾರಾಷ್ಟ್ರಗಳಲ್ಲೂ ಜನರು ಭಾಷಿಕ ಚಳವಳಿಯನ್ನು ಉಗ್ರರೂಪಕ್ಕೆ ತಂದಿದ್ದರು. ಇವೆಲ್ಲವನ್ನು ಪರಿಶೀಲಿಸಿದ ಸರಕಾರ ೨೦.೧೨.೧೯೫೩ ರಂದು ಭಾಷಾವಾರು ಪ್ರಾಂತ್ಯಗಳು ರಚನೆ ಬಗ್ಗೆ ವರದಿ ನೀಡಲು ಆಯೋಗವೊಂದನ್ನು ನೇಮಿಸಿತು.[೬೬] **ರಾಜ್ಯ ಪುನರ್ವಿಂಗಡಣಾ ಆಯೋಗ** (State re-organisation Commission) ಎಂದು ಕರೆಸಿಕೊಂಡ ಈ ಆಯೋಗಕ್ಕೆ **ಎಸ್. ಫಜಲ್ ಅಲಿ** ಅಧ್ಯಕ್ಷರು. ಆದ್ದರಿಂದಲೇ ಇದನ್ನು **ಫಜಲ್ ಆಲಿ ಆಯೋಗ** ಎಂತಲೂ ಕರೆಯುವುದು. ಇದಕ್ಕೆ **ಎಚ್.ಎನ್. ಕುಂಜ್ರು** ಮತ್ತು **ಕೆ.ಎಂ. ಪಣಿಕ್ಕರ್** ಅವರುಗಳು ಸದಸ್ಯರಾಗಿದ್ದರು. ಈ ಆಯೋಗವು ೩೦.೬.೧೯೫೫ ರೊಳಗೆ ತನ್ನ ವರದಿ ನೀಡಬೇಕಿತ್ತು. ಆದರೆ ಕ್ಷೇತ್ರ ಕಾರ್ಯದ ನಿಮಿತ್ತ ೩೦.೯.೧೯೫೫ ರೊಳಗೆ ವರದಿ ನೀಡಲು ಅವಧಿಯನ್ನು ವಿಸ್ತರಿಸಲಾಯಿತು. ದೇಶದಾದ್ಯಂತ ಪ್ರವಾಸ ಕೈಗೊಂಡ (೮.೪.೧೯೫೪ ರಿಂದ) ಈ ಆಯೋಗ ಸಾರ್ವಜನಿಕರ ಭೇಟಿ, ಮಾಹಿತಿ ಸಂಗ್ರಹ, ಲೇಖನ, ಅಂಕಿ-ಅಂಶಗಳ ಸಂಗ್ರಹ, ಸಂದರ್ಶನ, ಟಿಪ್ಪಣಿ, ಪ್ರಶ್ನಾವಳಿಗಳಿಗೆ ಉತ್ತರ, ದಾಖಲೆ-ನಕಾಶೆಗಳ ಸಂಗ್ರಹ ಮೊದಲಾದ ಕಾರ್ಯಗಳಲ್ಲಿ ತಲ್ಲೀನವಾಯಿತು.

ಇವೆಲ್ಲದಕ್ಕೂ ಪೂರ್ವಭಾವಿಯಾಗಿ **ಕೆಂಗಲ್ ಹನುಮಂತಯ್ಯ** ಅವರು ಉತ್ತರದವರಲ್ಲಿ ಮನೆ ಮಾಡಿಕೊಂಡಿದ್ದ ಮೈಸೂರಿನವರ ಬಗೆಗಿನ ಪೂರ್ವಾಗ್ರಹಗಳನ್ನು ಹೋಗಲಾಡಿಸಲು ಫೆಬ್ರುವರಿ ೧೯೫೪ ರಿಂದಲೇ ಪ್ರವಾಸ ಕೈಗೊಂಡಿದ್ದರು. ಇವರ ಜೊತೆಗೆ ವಿರೋಧ ಪಕ್ಷದ **ಜೆ.ಎಂ. ಇಮಾಮ್** ಹಾಗೂ **ಭೈರೇಗೌಡ** ಅವರುಗಳು ಇದ್ದರು. **ಧಾರವಾಡ, ಬಿಜಾಪುರ** ಗಳಲ್ಲಿ ಸಂಚರಿಸಿ ಅಲ್ಲಿನವರ ಏಕೀಕರಣದ ಬಗೆಗಿನ ಉತ್ಕಟವಾದ ಬಯಕೆಯನ್ನು ಅರಿತರಲ್ಲದೆ, ಮೈಸೂರು ಸಂಸ್ಥಾನಿಕರು ವಿರುದ್ಧವಾಗಿ ನಡೆದುಕೊಳ್ಳುವುದಿಲ್ಲ ಎಂದು ಸ್ಪಷ್ಟಪಡಿಸಿದರು. ಆದರೆ ವಾಸ್ತವ ಬೇರೆಯೇ ಆಗಿತ್ತು. ಮೈಸೂರಿನಲ್ಲಿನ ಕೆಂಗಲ್ ಮೊದಲಾದ ಕೆಲವೇ ಮಂದಿ ಏಕೀಕರಣವಾದಿಗಳು ಬಹುಸಂಖ್ಯಾತ ವಿರೋಧಿ ಬಣಗಳನ್ನು ಎದುರಿಸಬೇಕಾಗಿತ್ತು. ಉತ್ತರ ಕರ್ನಾಟಕದಲ್ಲಿನ ಕೆ.ಪಿ.ಸಿ.ಸಿ. ಸದಸ್ಯರು ಪರವಾಗಿ ಕೆಲಸ ಮಾಡುತ್ತಿದ್ದರೆ, ಮೈಸೂರಿನ ಕಾಂಗ್ರೆಸ್ಸಿಗರು ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದರು. ಕಾಂಗ್ರೆಸ್ಸಿಗರಲ್ಲಿಯೇ ಈ ರೀತಿಯ ಭಿನ್ನ ನಿಲುವುಗಳು ಪ್ರಾದೇಶಿಕ ಅಸಮತೋಲನ, ಮೈಸೂರು ವ್ಯಾಮೋಹ, ಜಾತಿ ವೈಷಮ್ಯ, ಆರ್ಥಿಕ ಅಸಮತೋಲನ ಇತರೆ ಗುಮಾನಿಗಳಿಗೆ ಹೆಚ್ಚಿನ ಕುಮ್ಮಕ್ಕನ್ನು ಕೊಟ್ಟಿದ್ದವು. ಜನರ ಮನಸ್ಸಿನಿಂದ ಇಂಥ ಶಂಕೆ-ಗುಮಾನಿಗಳನ್ನು ತೆಗೆದು ಹಾಕುವುದು ಅಷ್ಟು ಸುಲಭ ಆಗಿರಲಿಲ್ಲ. ಹೀಗಾಗಿ ಈ ವಾಸ್ತವಾಂಶಗಳನ್ನು

ಹೊರಗೆಡಹಲು ಮೈಸೂರು ಸರಕಾರ ಎಂ. ಶೇಷಾದ್ರಿ ಅವರ ನೇತೃತ್ವದ ಒಂದು ಸಮಿತಿಯನ್ನು ರಚಿಸಿತು.

ಈ ಘಟ್ಟದಲ್ಲಿ ರಾಜಕೀಯಕ್ಕಿಂತಲೂ, ಸಾಂಸ್ಕೃತಿಕವಾಗಿ ಬೆಸುಗೆ ಹಾಕುವ ಕೆಲಸ ಆಗಬೇಕಿತ್ತು. ಇದನ್ನು ಅರಿತ ಅಂದಿನ ಸಾಹಿತಿ-ಕಲಾವಿದರು, ಪತ್ರಕರ್ತರು, ಸಂಶೋಧಕರು, ಗಮಕಿ-ಗಾಯಕರು ತಮ್ಮ ತಮ್ಮ ಮಾಧ್ಯಮಗಳ ಮೂಲಕ ಪ್ರಯತ್ನಪಟ್ಟರು. ಈ ನಿಟ್ಟಿನಲ್ಲಿ **ಸಂಯುಕ್ತ ಕರ್ನಾಟಕ, ನವಯುಗ, ನಾಗರಿಕ, ತಾಯಿನಾಡು, ಕರ್ನಾಟಕ, ಕನ್ನಡ ನುಡಿ, ಪರಿಷತ್ಪತ್ರಿಕೆ, ನವಕರ್ನಾಟಕ, ಪ್ರಪಂಚ, ತರುಣ ಕರ್ನಾಟಕ, ಪ್ರಬುದ್ಧ ಕರ್ನಾಟಕ** ಮೊದಲಾದ ಪತ್ರಿಕೆ-ನಿಯತಕಾಲಿಕೆಗಳು ಕವನ-ಲೇಖನ, ಸಂಪಾದಕೀಯಗಳನ್ನು ಪ್ರಕಟಿಸಿ ಏಕೀಕರಣಕ್ಕಾಗಿ ಸಜ್ಜುಗೊಳಿಸಲಾರಂಭಿಸಿದವು. **ಪಿ. ಕಾಳಿಂಗರಾಯರು** ನಾಡಗೀತೆಗಳ ಮೂಲಕ ಕನ್ನಡಿಗರನ್ನು ಸಂಘಟಿಸುವ ಕಾರ್ಯಕ್ಕೆ ಗಮನಕೊಟ್ಟರು. ೧೯೫೫ರ ಸಾಹಿತ್ಯ ಸಮ್ಮೇಳನ (ಮೈಸೂರು)ಕ್ಕೆ ಅಧ್ಯಕ್ಷರಾಗಿದ್ದ **ಕೆ. ಶಿವರಾಮಕಾರಂತರು** ಸಮಕಾಲೀನ ವಿಷಮ ಸ್ಥಿತಿಯನ್ನು ಗಮನಿಸಿ ಆಡಳಿತ, ಹಣಕಾಸು, ಜಾತಿ-ಕೋಮುಗಳ ರಾಜಕೀಯ ಅಡಚಣೆಗಳನ್ನು ಮೆಟ್ಟಿ ನಿಲ್ಲುವ ಶಕ್ತಿ ಕನ್ನಡಿಗರಿಗೆ ಬರಲಿ ಎಂದು ಹಾರೈಸಿದರು. ಇವರು 'ಎರಡು ಕರ್ನಾಟಕ'ಗಳ ನಿರ್ಮಾಣಕ್ಕೆ ತೀವ್ರ ವಿರೋಧ ವ್ಯಕ್ತಪಡಿಸಿದ್ದೂ ಉಂಟು.[೬೬]

ಕಾಂಗ್ರೆಸ್ಸನ್ನು ಹೊರತುಪಡಿಸಿದ 'ಸೋಷಿಯಲಿಸ್ಟ್' ಮತ್ತು 'ಕಮ್ಯುನಿಸ್ಟ್ ಪಕ್ಷ'ಗಳು ಜನರ ಭಾವನೆಗಳೊಂದಿಗೆ ಬೆರೆತು ಏಕೀಕರಣಕ್ಕಾಗಿ ಕೆಲಸ ಮಾಡುತ್ತಿದ್ದವು. ಈ ಮಧ್ಯೆ **ಕಿಸಾನ್ ಮಜ್ದೂರು ಪ್ರಜಾಪಕ್ಷವು ಸೋಷಿಯಲಿಸ್ಟ್ ಪಕ್ಷ**ದೊಡನೆ ಬೆರೆತದ್ದರಿಂದ ಏಕೀಕರಣವಾದಿಗಳಿಗೆ ಇನ್ನಷ್ಟು ಬೆಂಬಲ ದೊರೆಯಿತು. **ಭಾರತದ ಕಮ್ಯುನಿಸ್ಟ್ ಪಕ್ಷ**ದವರು ಇಂಡಿಯಾದಾದ್ಯಂತ ಭಾಷಾವಾರು ಪ್ರಾಂತ್ಯಗಳ ರಚನೆ ಆಗಬೇಕೆಂದು ಪಟ್ಟುಹಿಡಿದು ಕಾರ್ಯೋನ್ಮುಖರಾಗಿದ್ದರು. **ಪ್ರಜಾ ಸೋಷಿಯಲಿಸ್ಟ್ ಪಕ್ಷ**ದ **ಶಾಂತವೇರಿ ಗೋಪಾಲಗೌಡ** ಅವರು ಸದನದ ಶಾಸಕರಲ್ಲಿ ಏಕೀಕರಣದ ಬಗೆಗಿನ ಭಯ-ಶಂಕೆಗಳನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಪ್ರಯತ್ನಿಸುತ್ತಿದ್ದರು. ಅಲ್ಲದೆ ಕಾಂಗ್ರೆಸ್ಸಿಗೆ ನಿಖರವಾದ ಯಾವುದೇ ನಿಲುವು ಇಲ್ಲದಿದ್ದುದರಿಂದ ಬಗ್ಗೆ ಟೀಕಿಸುತ್ತಿದ್ದುದು ದಾಖಲಾಗಿದೆ.

ಬೀದರ್, ಗುಲ್ಬರ್ಗಾ ಜಿಲ್ಲೆಗಳನ್ನೊಳಗೊಂಡ **ಹೈದರಾಬಾದ್-ಕರ್ನಾಟಕ ಕ್ರಿಯಾ ಸಮಿತಿ**ಯೊಂದು ರೂಪು ತಳೆದಿತ್ತು. ಈ ಸಮಿತಿಯ ಪ್ರಧಾನ ಕಾರ್ಯದರ್ಶಿಗಳಾಗಿದ್ದ

ಕಾಮ್ರೇಡ್ ವಿ.ಎಸ್. ಪಾಟೀಲರು ಏಕೀಕರಣಕ್ಕಾಗಿ ಒತ್ತಡ ತರಲು 'ಸರ್ವಪಕ್ಷಗಳ ನಿಯೋಗ'ವೊಂದನ್ನು ರಚಿಸಿ ದೆಹಲಿಗೆ ಕಳುಹಿಸಿದ್ದರು. ಚಳವಳಿಗಾರರಿದ್ದ 'ಅಕರಾನಿ ಪರಿಷತ್ತು' ಕನ್ನಡಿಗರ ಸಾಂಸ್ಕೃತಿಕ ರಾಜಧಾನಿಯಾದ ಹಂಪಿಯಲ್ಲಿ ಸಮ್ಮೇಳನವೊಂದನ್ನು ನಡೆಸಿತ್ತು. ಕಮ್ಯುನಿಸ್ಟ್ ಪಕ್ಷವು ಅಕರಾನಿ ಪರಿಷತ್ತಿನಲ್ಲಿದ್ದ ಒಂದು ಸಕ್ರಿಯ ಸಂಘಟನೆ. ಅಲ್ಲದೆ ಇದು ರೈಲ್ವೆ ಬಂದ್, ಸತ್ಯಾಗ್ರಹ, ಸಭೆ, ಮೆರವಣಿಗೆ, ಚಳವಳಿಯ ವಿಸ್ತರಣೆ ಇತ್ಯಾದಿಗಳ ಬಗ್ಗೆ ಗಮನಹರಿಸುತ್ತಿದ್ದ ಸಂಘಟನೆ. ಹೀಗಾಗಿ ಹಂಪಿಗೆ ತನ್ನ ಹತ್ತೊಂಬತ್ತು ಜನ (ಕರ್ನಾಟಕ ಪ್ರಾಂತ್ಯ ಘಟಕದ) ಪ್ರತಿನಿಧಿಗಳನ್ನು ಕಳುಹಿಸಿಕೊಟ್ಟಿತ್ತು. ಹಿಂದೊಮ್ಮೆ ಹುಬ್ಬಳ್ಳಿಯ ಘಟನೆಯಲ್ಲಿ (೧೯೫೩ರ ಏಪ್ರಿಲ್) ಕಮ್ಯುನಿಸ್ಟರನ್ನು 'ದರೋಡೆಕೋರರು' ಎಂದು ಕರೆದಿದ್ದ ಬಿ.ಎಸ್. ದಾತಾರ್ ಅವರು ಈ ಸಂದರ್ಭದಲ್ಲಿ ಕರ್ನಾಟಕಕ್ಕೆ ಬಂದರು. ಇವರಿಗೆ ಕಪ್ಪು ಬಾವುಟಗಳನ್ನು ಪ್ರದರ್ಶಿಸಿ ಅಸಮಾಧಾನವನ್ನು ವ್ಯಕ್ತಪಡಿಸಲಾಯಿತು. ಇಂಥ ಹತ್ತು ಹಲವು ಪ್ರಕ್ರಿಯೆಗಳು ಏಕೀಕರಣದ ಸಾಕಾರತೆಯನ್ನು ಕಂಡುಕೊಳ್ಳುವಲ್ಲಿ ಸಹಕಾರಿಯಾಗಲಾರಂಭಿಸಿದ್ದವು.

ಮುಖ್ಯಮಂತ್ರಿ ಕೆಂಗಲ್ಲರು ನೇಮಿಸಿದ್ದ ಎಂ. ಶೇಷಾದ್ರಿ ನೇತೃತ್ವದ ವಸ್ತು ಸ್ಥಿತಿಮಾಪಕ ಸಮಿತಿ (Facts finding committee)ಯು ತನ್ನ ವರದಿಯನ್ನು ಪ್ರಕಟಿಸಿತ್ತು. ಇದರಲ್ಲಿ ಅಂಕಿ-ಅಂಶಗಳು ಉತ್ತರದ ಕನ್ನಡ ಪ್ರದೇಶಗಳು 'ಮಾದರಿ ಮೈಸೂರು ಸಂಸ್ಥಾನ'ಕ್ಕೆ ಹೊರೆ ಆಗುತ್ತದೆ ಎಂಬುದನ್ನು ಹೊರಗೆಡಹಿದ್ದವು. ಈ ವರದಿಯು ಏಕೀಕರಣದ ಪರವಾಗಿರುತ್ತದೆ ಎಂದು ಭಾವಿಸಿದ್ದ ಜನರಿಗೆ ನಿರಾಶೆ ಆಗದಿರಲಿಲ್ಲ. ಅಲ್ಲದೆ ಏಕೀಕರಣದ ವಿರೋಧಿಗಳಿಗೆ ಈ ವರದಿ ಒಂದು ನೆಪವೂ ಆಯಿತು. ಆದರೆ ಸಂಸ್ಥಾನದ ಜನಸಮುದಾಯ ಏಕೀಕರಣದ ಪರವಾಗಿಯೇ ಇತ್ತು ಎಂಬುದನ್ನು ಸಮಕಾಲೀನ ಸಂಘಟನೆಗಳ ಬೆಂಬಲದಿಂದ ರುಜುವಾತು ಆಯಿತು.

ಪ್ರವಾಸದಲ್ಲಿದ್ದ ಫಜಲ್ ಅಲಿ ಆಯೋಗವು ೧೯೫೪ರ ಜೂನ್‌ನಲ್ಲಿ ಬೆಂಗಳೂರಿಗೆ ಆಗಮಿಸಿತು. 'ಮೈಸೂರು ಕಾಂಗ್ರೆಸ್ ಪಕ್ಷ'ದಲ್ಲಿ ಏಕೀಕರಣಕ್ಕೆ ಪರ ಮತ್ತು ವಿರುದ್ಧವಾದ ಎರಡು ಬಣಗಳಿದ್ದವು. ಆಯೋಗದ ಮುಂದೆ ಪರವಾಗಿ ಹೇಳಿಕೆ ನೀಡಿದರೆ ಕಾಂಗ್ರೆಸ್ ಒಡೆದು ಸರ್ಕಾರ ಪತನ ಆಗುತ್ತದೆ ಎಂಬ ಭಯ ಆವರಿಸಿತ್ತು. ಅಲ್ಲದೆ ಈ ಬಗ್ಗೆ ಕಾಂಗ್ರೆಸ್ಸಿಗರಾರೂ ಹೇಳಿಕೆಗಳನ್ನು ನೀಡಬಾರದು ಎಂದು ಕಟ್ಟಾಜ್ಞೆ(Whip)ಯನ್ನು ವಿಧಿಸಿದ್ದರು. ಹೀಗಾಗಿ ಬಹುಪಾಲು ಕಾಂಗ್ರೆಸ್ ಮಂತ್ರಿಮಂಡಲದ ಸದಸ್ಯರು ತಮ್ಮ

ಅಧಿಕಾರದ ಸ್ಥಾನಗಳನ್ನು ಕಳೆದುಕೊಳ್ಳಲು ಹೆದರಿದ್ದರು. ಇದರಿಂದ ಅನೇಕರು ಆಯೋಗದ ಮುಂದೆ ಹಾಜರಾಗಲೇ ಇಲ್ಲ.[೭೮] ಆದರೆ **ಎಸ್. ನಿಜಲಿಂಗಪ್ಪ** ಮೊದಲಾದ ಕಲವೇ ಕಾಂಗ್ರೇಸ್ಸಿಗರು ಏಕೀಕರಣಕ್ಕೆ ತಮ್ಮ ಹಾಗೂ ಮೈಸೂರಿನ ಜನತೆಯ ಬೆಂಬಲವಿದೆ ಎಂದು ಹೇಳಿಕೆ ನೀಡಿದರು. ಅಷ್ಟೇ ಅಲ್ಲದೆ **ಕೆ.ಎಂ. ರುದ್ರಪ್ಪ** ಅವರ ಅಧ್ಯಕ್ಷತೆಯಲ್ಲಿ 'ಕರ್ನಾಟಕ ಯುವಕ ಸಂಘ' ಹಾಗೂ ಇನ್ನಿತರ ಸಂಘ-ಸಂಸ್ಥೆಗಳು ಸಾಕ್ಷಿ-ಪುರಾವೆಗಳನ್ನು ನೀಡಿ ಏಕೀಕರಣವನ್ನು ಬಯಸಿದವು. ಈ ಮಧ್ಯೆ ಆಯೋಗವು ಬೆಂಗಳೂರಿನಲ್ಲಿ ಇದ್ದುದನ್ನು ಮನಗಂಡ ಅನೇಕ ಪತ್ರಿಕೆ-ನಿಯತಕಾಲಿಕೆಗಳು **ಸಂಯುಕ್ತ ಕರ್ನಾಟಕ**ಕ್ಕಾಗಿ ಬೆಂಬಲ ನೀಡಿ ವಿಶೇಷ ಬರೆಹಗಳನ್ನು ಪ್ರಕಟಿಸಿದವು. ಅಲ್ಲದೆ ಸಾಹಿತ್ಯಕ-ಸಾಂಸ್ಕೃತಿಕ, ಯುವಕ, ಕಾರ್ಮಿಕ, ವಾಣಿಜ್ಯ-ವ್ಯವಹಾರಗಳ ಸಂಘ-ಸಂಸ್ಥೆಗಳು, ಸೋಷಿಯಲಿಸ್ಟ್ ಮತ್ತು ಕಮ್ಯುನಿಸ್ಟ್ ಮೊದಲಾದ ರಾಜಕೀಯ ಪಕ್ಷಗಳು, ಕುರುವ ಹಾಗೂ ಇನ್ನಿತರೆ ಹಿಂದುಳಿದ ವರ್ಗಗಳ ಸಂಘಟನೆಗಳು ಏಕೀಕರಣಕ್ಕಾಗಿ ಬೆಂಬಲ ಸೂಚಿಸಿದವು. ಈ ಸಂದರ್ಭದಲ್ಲಿ ಕೆಲವು ಮೈಸೂರಿಗರಿಂದ 'ಎರಡು ಕರ್ನಾಟಕಗಳ ರಚನೆ' ಬಗ್ಗೆಯೂ ಮನವಿಗಳು ಬಾರದೆ ಇರಲಿಲ್ಲ.

ಆಯೋಗವು ೮.೬.೧೯೫೪ ರಂದು **ಮಂಗಳೂರಿಗೆ** ಭೇಟಿ ನೀಡಿತು. ಇಲ್ಲಿನ 'ತುಳು ಮಹಾಸಭೆ'ಯ **ಕೆ.ಬಿ. ಜಿನರಾಜ ಹೆಗಡೆ, ಕೆ. ವಾಸುದೇವಾಚಾರ್ಯ** ಅವರುಗಳು ಮಿಕ್ಕ ಕನ್ನಡಿಗರೊಂದಿಗೆ ಸೇರಲು ತುಳುವರು ೧೯೨೮ ರಿಂದಲೂ ಪ್ರಯತ್ನ ನಡೆಸಿರುವ ಪುರಾವೆಗಳನ್ನು ಒದಗಿಸಿದರು. ಇಲ್ಲಿನ ಕಾಂಗ್ರೇಸ್ಸಿಗರು **ಪಿಂಟೋ** ಅವರ ನೇತೃತ್ವದಲ್ಲೂ, **ಪ್ರಸಪಾ** (ಪ್ರಜಾ ಸಮಾಜವಾದಿ) ಪಕ್ಷದವರು **ಸದಾನಂದ ಹೆಗಡೆ, ಕೆ.ಆರ್. ಕಾರಂತರ** ಮುಖಂಡತ್ವದಲ್ಲೂ ಆಯೋಗಕ್ಕೆ ಏಕೀಕರಣದ ಮನವಿಗಳನ್ನು ಸಲ್ಲಿಸಿದರು. ಮಂಗಳೂರು ನಗರ ಸಭೆ, ಜನಸಂಘ, ಪತ್ರಿಕೋದ್ಯಮಿಗಳ ಸಂಘ, ಕರ್ನಾಟಕ ಪ್ರಾಂತ ರಚನಾ ಪರಿಷತ್ತು, ಸಾಹಿತ್ಯಕ-ಸಾಂಸ್ಕೃತಿಕ ಸಂಘಟನೆಗಳು ಈ ಭಾಗದಿಂದ ತಮ್ಮ ತಕರಾರು ಏನು ಇಲ್ಲ ಎಂಬುದನ್ನು ಸ್ಪಷ್ಟಪಡಿಸಿದವು. ದಕ್ಷಿಣ ಕನ್ನಡ, ಕೊಡಗು ಜಿಲ್ಲೆಗಳನ್ನು ಕೇರಳಕ್ಕೆ ಸೇರಿಸುವ ಹುನ್ನಾರಗಳು ಹಾಗೂ ವದಂತಿಗಳ ಬಗ್ಗೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದರು. ಅಲ್ಲದೆ ತುಳುವರು 'ಪ್ರತ್ಯೇಕ ಕರಾವಳಿ ರಾಜ್ಯ ಸ್ಥಾಪನೆ' ವಿಚಾರದಲ್ಲಿ ವಿಭಾಗಗಳನ್ನು ಮಾಡುವುದರ ಬಗ್ಗೆ ವಿರೋಧಿಸುವುದಾಗಿ ಆಯೋಗಕ್ಕೆ ತಿಳಿಸದೆ ಇರಲಿಲ್ಲ. ಸಾಹಿತಿ-ಕಲಾವಿದರು ಆಯೋಗಕ್ಕೆ ಸಾಂಸ್ಕೃತಿಕ ಮಹತ್ವವನ್ನು ಮನವರಿಕೆ ಮಾಡಿಕೊಟ್ಟು, ಏಕೀಕರಣವನ್ನು ಬೆಂಬಲಿಸಿದರು.

**ಹೈದರಾಬಾದ್-ಕರ್ನಾಟಕ** ಪ್ರದೇಶದಲ್ಲಿ ಸಂಚರಿಸಿದ ಆಯೋಗವು ಈ ಭಾಗದವರಲ್ಲಿ ಇದ್ದ ಏಕೀಕರಣದ ತುಡಿತವನ್ನು ಮನಗಂಡಿತು. ಆದರೆ ಹೈದರಾಬಾದ್ ಪ್ರದೇಶ ಕಾಂಗ್ರೇಸ್ ಸಮಿತಿಯ ಕರ್ನಾಟಕದ ಸದಸ್ಯರು ಏಕೀಕರಣಕ್ಕೆ ಷರತ್ತೊಂದನ್ನು ಮುಂದಿಟ್ಟಿದ್ದರು. ಈ ಷರತ್ತಿಗೆ **ಜನಾರ್ಧನರಾವ್ ದೇಸಾಯಿ, ಡಾ.ಸಿ.ಎಸ್. ಮೇಲುಕೋಟೆ, ವೈ. ವಿರೂಪಾಕ್ಷಪ್ಪ, ಶ್ರೀನಿವಾಸರಾವ್ ಏಖೆಲೇಕರ, ಎಸ್. ರುದ್ರಪ್ಪ, ಶ್ರೀಮತಿ ವಿಮಲಾಬಾಯಿ, ರಾಘು ಜಹಗೀರದಾರ, ಕೃಷ್ಣಾಚಾರ್ಯ ಜೋಷಿ** ಮೊದಲಾದವರು ಸಹಿ ಹಾಕಿದ್ದರು. ಆ **ಷರತ್ತು**-

> "ರಚಿತವಾಗುವ ಭಾವೀ ಕರ್ನಾಟಕ ರಾಜ್ಯವು ಸಂಯುಕ್ತ ಕರ್ನಾಟಕ
> ವಾಗಿರಬೇಕೆಂದು ಈ ಪ್ರತಿನಿಧಿಗಳ ಅಭಿಪ್ರಾಯವಾಗಿರುವುದು ಭಾವಿ
> ಕರ್ನಾಟಕ ರಾಜ್ಯದಲ್ಲಿ ರಾಜ ಪ್ರಮುಖರ ಹುದ್ದೆ ಇರಬಾರದು."[೬೯]

- ಎಂಬುದೇ ಆಗಿತ್ತು. ಇದು ನೇರವಾಗಿ ಮೈಸೂರಿಗರ ಭಾವನೆಗಳಿಗೆ ಸಂಬಂಧಿಸಿದ್ದು. ಅಂದರೆ ಮೈಸೂರಿನ ಸಂಸ್ಥಾನಿಕರು, ಸ್ವಾತಂತ್ರ್ಯದ ಅನಂತರವೂ ಮಹಾರಾಜರೇ ಭಾವಿ ಸಂಯುಕ್ತ ಕರ್ನಾಟಕದ **ರಾಜ್ಯಪಾಲರಾಗಿ** ಮುಂದುವರೆಯಬೇಕು ಎಂಬ ಇಂಗಿತವನ್ನು ವ್ಯಕ್ತಪಡಿಸಿದ್ದರು. ಇದಕ್ಕೆ ಹೈದರಾಬಾದ್ ಕನ್ನಡಿಗರ ತೀವ್ರ ವಿರೋಧ ಇತ್ತು. ಒಂದೊಮ್ಮೆ ಮುಂಬಯಿಯ ಕಾವಸಜಿ ಸಭಾಭವನದಲ್ಲಿ **ಎಸ್. ನಿಜಲಿಂಗಪ್ಪ** ಅವರು ಈ ಬೇಡಿಕೆ ಇಟ್ಟು ಮತಕ್ಕೆ ಹಾಕಿದ್ದುದು ಉಂಟು. ಆಗ **ಜಯದೇವಿತಾಯಿ ಲಿಗಾಡೆ, ರಂ.ರಾ. ದಿವಾಕರ, ಬಿ.ಸಿದ್ಧಲಿಂಗಯ್ಯ, ಕೆ.ಆರ್. ಕಾರಂತ** ಮೊದಲಾದವರು ವಿರೋಧವನ್ನು ವ್ಯಕ್ತಪಡಿಸಿದ್ದರು.[೭೦] ಈ ರೀತಿಯ ಷರತ್ತನ್ನು ವಿಧಿಸಿದ್ದು ಸಹಜವೇ ಆಗಿತ್ತು. ಈ ಭಾಗದವರು ಮೈಸೂರು ಸಂಸ್ಥಾನಿಕರ ಮೇಲಿನ ವಿರೋಧಕ್ಕಿಂತ ಏಕೀಕರಣದ ಸರಿಯಾದ ರೂಪವನ್ನು ನೋಡಲು ಬಯಸಿದರು. ಏಕೆಂದರೆ ಎಲ್ಲ ಸಂಸ್ಥಾನಿಕರು ತಮ್ಮ ತಮ್ಮ ಅರಸರ ಪ್ರಾತಿನಿಧ್ಯ (ಮೈಸೂರಿವರ ರೀತಿಯಲ್ಲಿ)ವನ್ನು ಕೇಳುತ್ತಿದ್ದರೆ 'ಅಖಂಡ ಕರ್ನಾಟಕ'ವು ಅಸ್ತಿತ್ವಕ್ಕೆ ಬರುತ್ತಿರಲಿಲ್ಲ. ಈ ಮುಂದಾಲೋಚನೆ ಅವರಲ್ಲಿ ಇತ್ತು.

ಚೀಫ್ ಕಮೀಷನರ್ ಅವರ ಆಳ್ವಿಕೆಗೆ ಒಳಪಟ್ಟಿದ್ದ (೧೯೫೭ ರವರೆಗೆ) **ಕೊಡಗಿಗೂ** ಆಯೋಗವು ಭೇಟಿ ನೀಡಿತ್ತು. ಇಲ್ಲಿ ಸಿ.ಬಿ. ಮೋನಯ್ಯ ಮೊದಲಾದ ಧುರೀಣರು ಕೊಡಗಿನ ಜನತೆ ಏಕೀಕರಣವನ್ನು ಬಯಸುತ್ತದೆ ಎಂದು ಮನವಿ ಸಲ್ಲಿಸಿದರು. ಆದರೆ

೩೩ ಮಂದಿ ಸದಸ್ಯರಿದ್ದ ಸಮಿತಿಯೊಂದು ಪಿ.ಐ. ಬೆಳ್ಳಿಯಪ್ಪನವರ ನೇತೃತ್ವದಲ್ಲಿ ಕೊಡಗು ಸಂಯುಕ್ತ ಕರ್ನಾಟಕವನ್ನು ಸೇರುವುದಿಲ್ಲ ಎಂಬುದನ್ನು ವ್ಯಕ್ತಪಡಿಸಿದರು. ಅಲ್ಲದೆ ಕೊಡಗಿನ ಪ್ರತ್ಯೇಕ ವೈಶಿಷ್ಟ್ಯತೆಯನ್ನು ಉಳಿಸಿಕೊಳ್ಳಲು ಅದನ್ನು ಹಾಗೆಯೇ ಸ್ವತಂತ್ರವಾಗಿ ಬಿಡಬೇಕು ಎಂದು ಆಯೋಗವನ್ನು ಕೇಳಿಕೊಂಡಿದ್ದರು.

ರಾಜ್ಯಗಳ ಪುನರ್ವಿಂಗಡಣಾ ಆಯೋಗವು ಹುಬ್ಬಳ್ಳಿ, ಧಾರವಾಡ ಮತ್ತು ಬೆಳಗಾವಿಗಳಿಗೆ ಭೇಟಿ ಕೊಟ್ಟು ಅಲ್ಲಿನ ಜನರಲ್ಲಿ ಇದ್ದ ಏಕೀಕರಣದ ತುರ್ತನ್ನು ಪ್ರತ್ಯಕ್ಷವಾಗಿ ನೋಡಿತು. ೧೯.೬.೧೯೫೪ ರಂದು ಹುಬ್ಬಳ್ಳಿ ನಗರ ಸಭೆಯ ಅಟ್ಟದ ಮೇಲೆ ಆಯೋಗವು ಸಂದರ್ಶನ ನಡೆಸುವುದು ಎಂದು ಈ ಪ್ರದೇಶದ ಜನರು ಅರಿತರು. ಇಲ್ಲಿಗೆ ಕರ್ನಾಟಕ ಏಕೀಕರಣ ಸಂಘ, ಕರ್ನಾಟಕ ವಣಿಕ ಸಂಘ, ಹುಬ್ಬಳ್ಳಿ ವಕೀಲರ ಸಂಘ, ನಿವೃತ್ತ ಸೈನಿಕರ ಸಂಘ, ಕರ್ನಾಟಕ ಏಕೀಕರಣ ಪಕ್ಷ, ಅಕರಾನಿ ಪರಿಷತ್ತು, ಹುಬ್ಬಳ್ಳಿ ಕಮ್ಯುನಿಸ್ಟ್ ಪಾರ್ಟಿ, ಕ್ರೈಸ್ತ ಸೆಂಟಿನರಿ ಸಂಸ್ಥೆ ಪತ್ರಿಕೋದ್ಯಮಿಗಳು ಹಾಗೂ ಇನ್ನಿತರ ಸಾಂಸ್ಕೃತಿಕ ಸಂಸ್ಥೆಗಳು ಏಕೀಕರಣಕ್ಕಾಗಿ ಮನವಿಗಳನ್ನು ಸಲ್ಲಿಸಿದವು. ಮಹಿಳಾ ಸಂಘಟನೆಗಳು, ಮುಸ್ಲಿಮ್ ಮತ್ತು ಇತರೆ ಅಲ್ಪಸಂಖ್ಯಾತರ ಪ್ರತಿನಿಧಿಗಳು ಮನವಿಗಳನ್ನು ಸಲ್ಲಿಸದಿರಲಿಲ್ಲ. ಅಲ್ಲದೆ ಸೊಲ್ಲಾಪುರ, ಕಾರವಾರ, ಆಲೂರು, ಆದವಾನಿ, ರಾಯದುರ್ಗ, ಮೊದಲಾದ ಕಡೆಗಳಿಂದ ಕನ್ನಡಿಗರು ತಮ್ಮ ಪ್ರತಿನಿಧಿಗಳನ್ನು ಕಳುಹಿಸಿ ಬೆಂಬಲ ಸೂಚಿಸಿದರು. ಈ ಭಾಗದವರ ಏಕೀಕರಣದ ಉತ್ಕಟ ನಿಲುವು ಆಯೋಗಕ್ಕೆ ಮೊದಲೇ ತಿಳಿದಿತ್ತಾದರೂ ಪ್ರತ್ಯಕ್ಷ ಪ್ರಾಮಾಣೀಕರಿಸಿಕೊಂಡಿತು. ಒಂದೇ [illegible]ಲ್ಲಿ ಹತ್ತು ಸಾವಿರ ಕನ್ನಡಿಗರ ಸಹಿಗಳನ್ನು ಸಂಗ್ರಹಿಸಿ 'ಅಕರಾನಿ ಪರಿಷತ್ತು' 'ಅಖಂಡ ಕರ್ನಾಟಕ'ದ ಬಗೆಗೆ ಇದ್ದಂಥ ಕಾಳಜಿಯನ್ನು ಸಾಬೀತು ಪಡಿಸಿತು. ಇಲ್ಲಿನ ಪತ್ರಿಕೆಗಳು ಏಕೀಕರಣದ ಜರೂರಿನ ಬಗ್ಗೆ ಲೇಖನ-ವರದಿಗಳನ್ನು ಪ್ರಕಟಿಸಿದವು. ಅಲ್ಲದೆ ಹ.ರಾ. ಮೊಹರೆ (ಸಂಯುಕ್ತ ಕರ್ನಾಟಕ), ಡಾ. ಗೋಡಬೋಲೆ (ನಾಗರಿಕ) ಮೊದಲಾದ ಸಂಪಾದಕರು ನಿಯೋಗವನ್ನು ಖುದ್ದು ಭೇಟಿ ಮಾಡಿದ್ದು ಉಂಟು. ಹುಬ್ಬಳ್ಳಿಯ ಅಂಜುಮಾನ್ ಇಸ್ಲಾಂ ಸಂಸ್ಥೆ ಪರವಾಗಿ ಸಿ.ಎಚ್. ಮೊಹಸಿನ್ ಹಾಗೂ ಗದಗ್ ನಗರದ ಪರವಾಗಿ ಅದರ ಅಧ್ಯಕ್ಷರಾದ ಸಿ.ಎಫ್. ಅಂಗಡಿ ಅವರುಗಳು ಮನವಿ ಸಲ್ಲಿಸಿದರು.

ಮರುದಿನವೇ (೨೦.೬.೧೯೫೪) ಆಯೋಗವು ಧಾರವಾಡ ನಗರಕ್ಕೆ ಭೇಟಿ ನೀಡಿತು. ಇಲ್ಲಿನ ಕಟ್ಟಾ ಏಕೀಕರಣವಾದಿ ಆಲೂರ ವೆಂಕಟರಾಯ ಮೊದಲಾದ ಹಿರಿಯರು ಕನ್ನಡ

ನಾಡಿನ ಚರಿತ್ರೆಯ ಬಗ್ಗೆ ಇರುವ ಎಲ್ಲ ಪುರಾವೆಗಳನ್ನು ಆಯೋಗದ ಗಮನಕ್ಕೆ ತಂದರು. ಉತ್ತರ ಕರ್ನಾಟಕದವರ ಏಕೀಕರಣ ತುರ್ತು ಹಾಗೂ ಮೈಸೂರಿಗರ ತಕರಾರು ಮೊದಲಾದವು ಗಳನ್ನು ಆಯೋಗದೊಂದಿಗೆ ಚರ್ಚಿಸಿ ಭಾಷಾತತ್ವದಡಿಯಲ್ಲಿ ಕನ್ನಡ ಪ್ರಾಂತ್ಯಗಳೆಲ್ಲವೂ ಒಂದುಗೂಡಲೇಬೇಕು ಎಂದು ಒತ್ತಾಯ ಮಾಡಿದರು. ಇದರಿಂದ ಕರ್ನಾಟಕಕ್ಕಷ್ಟೇ ಅಲ್ಲದೆ ಭಾರತದ ಅಭಿವೃದ್ಧಿಯು ಸಹ ಭಾಷಾವಾರು ಪ್ರಾಂತ್ಯಗಳ ನಿರ್ಮಾಣವನ್ನೇ ಅವಲಂಬಿಸಿದೆ ಎಂಬುದು ಇವರ ವಾದ. ಧಾರವಾಡದಲ್ಲಿ ಆಲೂರರಲ್ಲದೆ **ಮೆಣಸಿನಕಾಯಿ, ಜಿ.ಎಸ್. ಹುರಳಿ,** ಡಾ.ಕಮಲಾಪುರ್, **ಗೋಕಾಕ** ಮೊದಲಾದವರು ನಿಯೋಗಕ್ಕೆ ಮನವಿಗಳನ್ನು ಸಲ್ಲಿಸಿದರು. ಇಲ್ಲಿನ **ಕರ್ನಾಟಕ ವಿದ್ಯಾವರ್ಧಕ ಸಂಘ, ರೆಡ್‌ಕ್ರಾಸ್ ಸೊಸೈಟಿ, ವನಿತಾ ಸೇವಾಸಮಾಜ, ಕಲಾಲ ಸಂಘ, ಬಾರ್ ಅಸೋಸಿಯೇಷನ್, ಮರಾಠಿ ಮಂಡಳಿ, ಧಾರವಾಡ ಜಿಲ್ಲಾ ಲೋಕಲ್ ಬೋರ್ಡ್, ನಗರ ಸಭೆ** ಮೊದಲಾದ ಸಂಘ-ಸಂಸ್ಥೆಗಳು ಕನ್ನಡ ಪ್ರದೇಶಗಳ ಒಂದುಗೂಡುವಿಕೆಗೆ ಒತ್ತಡ ತಂದವು.

ಧಾರವಾಡದಿಂದ **ಬೆಳಗಾವಿಗೆ** ಹೊರಟ ಆಯೋಗ ಅಲ್ಲಿಯೂ (೨೧.೬.೧೯೫೪ ರಂದು) ಮನವಿಗಳನ್ನು ಪಡೆಯಿತು. **ಬೆಳವಿ ದತ್ತರಾವ್, ಗಂಗಾಧರರಾವ್ ದೇಶಪಾಂಡೆ** ಮೊದಲಾದವರು ಆಯೋಗವನ್ನು ಭೇಟಿ ಮಾಡಿ ವಿವರಗಳನ್ನು ನೀಡಿದರು. ಇಲ್ಲಿ ಮರಾಠಿ ಪ್ರಾಬಲ್ಯ ಹೆಚ್ಚು ಇತ್ತು. ಕನ್ನಡ ಪ್ರದೇಶಗಳು ಕರ್ನಾಟಕದಲ್ಲಿ ಸೇರಬೇಕೆಂದು ಇಲ್ಲಿನ ಕನ್ನಡಿಗರು, ಸಂಘ-ಸಂಸ್ಥೆಗಳು ಹಾತೊರೆಯುತ್ತಿದ್ದವು. ಸುಮಾರು ನೂರಕ್ಕೂ ಹೆಚ್ಚಿನ ಸಂಘ-ಸಂಸ್ಥೆಗಳು ಒಂದು ಶಿಷ್ಟ ಮಂಡಲಿಯನ್ನು ರಚಿಸಿಕೊಂಡು **ಜಿ.ಎಸ್. ಪರಮಶಿವಯ್ಯ** ಅವರ ನೇತೃತ್ವದಲ್ಲಿ ಬೆಳಗಾವಿ ಏಕೀಕೃತ ಕರ್ನಾಟಕಕ್ಕೆ ಸೇರಬೇಕಾದ ಅನಿವಾರ್ಯತೆಯನ್ನು ಸ್ಪಷ್ಟಪಡಿಸಿದರು. ಜಿಲ್ಲಾ ಹಾಗೂ ನಗರ ಕಾಂಗ್ರೆಸ್ ಸಮಿತಿಗಳು ಹಾಗೂ **ವಿಧಾನಸಭಾ ಸದಸ್ಯರು** ಜಿಲ್ಲೆಯನ್ನು ಸ್ವಲ್ಪವೂ ಛಿದ್ರಗೊಳಿಸದೆ ಒಟ್ಟು ರೂಪದಲ್ಲಿ ಕರ್ನಾಟಕಕ್ಕೆ ಸೇರಿಸಬೇಕೆಂಬ ವಾದ ಇವರದಾಗಿತ್ತು. **ಕರ್ನಾಟಕ ಏಕೀಕರಣ ಸಮಿತಿ, ಅಕರಾನಿ ಪರಿಷತ್ತು, ಕೆ.ಎಲ್.ಇ. ಸಂಸ್ಥೆಗಳು** ವಿಶೇಷ ಮನವಿಗಳನ್ನು ಸಲ್ಲಿಸಿದವು. ಗಡಹಿಂಗ್ಲಜ ಮೊದಲಾದ ಗಡಿ ಪ್ರದೇಶಗಳ ಕನ್ನಡಿಗರು ಹಾಗೂ ಈ ಭಾಗಗಳಲ್ಲಿ ಏಕೀಕರಣಕ್ಕಾಗಿ ಹುರುಪು ತುಂಬುತ್ತಿದ್ದ **ಜಯದೇವಿತಾಯಿ ಲಿಗಾಡೆ** ಅವರ ಪ್ರಯತ್ನಗಳು ಗಮನಾರ್ಹ. ಮರಾಠಿಗರು ಆಕ್ರಮಣಕಾರಿ ಧೋರಣೆಗಳನ್ನು ಪ್ರತಿಭಟಿಸುತ್ತ ಮೇಲಿಂದ ಮೇಲೆ **ಜತ್ತ, ಅಕ್ಕಲಕೋಟೆ, ಸೊಲ್ಲಾಪುರ** ಮೊದಲಾದೆಡೆ ಗಳಲ್ಲಿ ಜನರ

ಮೂಲಕ ಏಕೀಕರಣಕ್ಕಾಗಿ ಜಯದೇವಿ ಅವರು ಒತ್ತಡ ತರುತ್ತಿದ್ದರು. ಅಷ್ಟೇ ಅಲ್ಲದೆ ಈ ಭಾಗದ ಮುಸ್ಲಿಂ ಮತ್ತು ಕ್ರೈಸ್ತ ಸಂಘಟನೆಗಳು, ದಲಿತರು, ಮೇದಾರ, ವಡ್ಡ ಮೊದಲಾದ ಜನಾಂಗಗಳವರು ಬೆಳಗಾವಿಯು ಅಖಂಡ ಕರ್ನಾಟಕದ ಭಾಗವಾಗಿರಬೇಕು ಎಂಬುದನ್ನು ಮನವರಿಕೆ ಮಾಡಿಕೊಟ್ಟರು.

ಉತ್ತರ ಕರ್ನಾಟಕವನ್ನೆಲ್ಲಾ ಸಂದರ್ಶಿಸಿ ಆಯೋಗ ಮತ್ತೆ ಬೆಂಗಳೂರು, ಮೈಸೂರು ನಗರಗಳನ್ನು ಸಂದರ್ಶಿಸಲು ವಾಪಸ್ಸು ಬಂದಿತು. ಈ ಬಾರಿ ಕಾಂಗ್ರೇಸ್ ಏಕೀಕರಣದ ಬಗ್ಗೆ ಅಭಿಪ್ರಾಯಗಳನ್ನು ಮಂಡಿಸಲು ತನ್ನ ಸದಸ್ಯರಿಗೆ ಅನುಮತಿ ನೀಡಿತ್ತು. ಆದರೆ ಹೀಗೆ ಮಂಡಿಸುವಾಗ ಬೇರೆ ರಾಜಕೀಯ ಪಕ್ಷಗಳೊಂದಿಗೆ ಗುರುತಿಸಿಕೊಳ್ಳುವಂತಿರಲಿಲ್ಲ. ಹೀಗಾಗಿ ಕೆಲವರು ಪರವಾಗಿ, ಮತ್ತೆ ಕೆಲವರು ವಿರುದ್ಧವಾಗಿ ಮನವಿಗಳನ್ನು ಸಲ್ಲಿಸಿದರು. ಎಚ್.ಕೆ. ವೀರಣ್ಣಗೌಡ, ಟಿ. ಮರಿಯಪ್ಪ, ಎ. ಭೀಮಪ್ಪ ನಾಯಕ, ಟೇಕೂರು ಸುಬ್ರಹ್ಮಣ್ಯಂ, ಎಚ್.ಬಿ. ಗುಂಡಪ್ಪಗೌಡ, ಎ.ವಿ. ರಾಮನಾಥನ್, ಪಾಮಡಿ ಸುಬ್ಬರಾವ್ ಚೆಟ್ಟಿ, ಎನ್. ಮಾಧವರಾವ್ ಮೊದಲಾದ ಧುರೀಣರು ಆಯೋಗವನ್ನು ವೈಯಕ್ತಿಕವಾಗಿಯೇ ಭೇಟಿ ಆದರು. ಅಲ್ಲದೆ ಸಂಸ್ಥಾನದ ವೀರಶೈವ ಸಂಘ, ಒಕ್ಕಲಿಗರ ಸಂಘ, ಕುರುಬರ ಸಂಘ, ಪ್ರಜಾ ಸಮಾಜವಾದಿ ಪಕ್ಷ, ಕಮ್ಯುನಿಸ್ಟ್ ಪಕ್ಷ, ವಕೀಲರುಗಳ ಸಂಘ ಮೊದಲಾದವು ಏಕೀಕರಣದ ಪರವಾಗಿ ಮನವಿ ಸಲ್ಲಿಸಿದವು.

ಆಯೋಗವು ಬೆಂಗಳೂರು-ಮೈಸೂರುಗಳಿಗೆ ಎರಡನೆಯ ಬಾರಿ ಬರುವುದಕ್ಕೆ ಮೊದಲು ಏಕೀಕರಣದ ಬಗ್ಗೆ ಅನೇಕ ಪಲ್ಲಟಗಳು ಮೈಸೂರಿಗರಲ್ಲಿ ಆಗಿದ್ದವು. ಅಂದರೆ ಆರ್ಥಿಕ ಅಸಮಾನತೆ, ಜಾತೀಯ ಅಸಮಾನತೆಗಳ ಜೊತೆಗೆ ಮಲೆನಾಡು ಬೇರೆ ಪ್ರಾಂತ್ಯ ಆಗಬೇಕು ಎಂಬ ವಾದಗಳೂ ಹುಟ್ಟಿಕೊಳ್ಳದಿರಲಿಲ್ಲ. ಹೀಗೆ ಮೂರು, ನಾಲ್ಕು ಕರ್ನಾಟಕಗಳ ರಚನೆ ಬಗ್ಗೆಯೂ ವಾದ-ವಿವಾದಗಳು ನಡೆಯುತ್ತಿದ್ದವು. ಇಂಥ ಸಂದರ್ಭದಲ್ಲಿ ಹಿಂದೆ ನೇಮಿಸಿದ್ದ ಶೇಷಾದ್ರಿ ಸಮಿತಿಯ ವರದಿ ಪ್ರಕಟ ಆಗಿತ್ತು. ಈ ವರದಿ ಬಗ್ಗೆ ಚರ್ಚಿಸಲು ೫.೩.೧೯೫೫ ರಂದು ಶಾಸನ ಸಭೆಯಲ್ಲಿ ವಿಶೇಷ ಸಭೆ ಕರೆಯಲಾಗಿತ್ತು. ಈ ಸಭೆಯಲ್ಲಿ ಪ್ರಜಾ ಸಮಾಜವಾದಿ ಪಕ್ಷದವರು ಹಾಗೂ ಅದರಲ್ಲೂ ಗೋಪಾಲಗೌಡರು ಮೈಸೂರು ಕಾಂಗ್ರೇಸ್ಸಿಗರು ಫಜಲಾಲಿ ಆಯೋಗಕ್ಕೆ ಭಿನ್ನ ಭಿನ್ನವಾಗಿ ಮನವಿ ಸಲ್ಲಿಸಿದ್ದರ ಬಗ್ಗೆ ಪ್ರಸ್ತಾಪಿಸಿದರು. ಅಲ್ಲದೆ ಶೇಷಾದ್ರಿ ವರದಿಯಲ್ಲಿನ

ಏಕೀಕರಣಕ್ಕಿರುವ ಆರ್ಥಿಕ ತೊಡಕಿನ ಅಂಶಗಳು ಮುಖ್ಯ ಕಾರಣವಾಗಿ ಒಪ್ಪಿಕೊಳ್ಳಲು ಸಾಧ್ಯ ಆಗುವುದಿಲ್ಲ ಎಂಬುದನ್ನು ಸ್ಪಷ್ಟ ಪಡಿಸಿದರು. ಆಗ ಸದನದಲ್ಲಿದ್ದ ಲಕ್ಕಪ್ಪನವರು ಮೈಸೂರೇತರ ಭಾಗಗಳಿಂದ ಮೈಸೂರು ಆರ್ಥಿಕವಾಗಿ ಬರಡಾಗುವುದನ್ನು ಪ್ರಸ್ತಾಪಿಸಿದ್ದರು. ಅಲ್ಲದೆ ಅವು 'ಬಹಳ' ಹಿಂದುಳಿದಿರು ವುದರಿಂದ ಮೈಸೂರನ್ನು ಹಾಗೆಯೇ ಉಳಿಸಿಕೊಳ್ಳುವುದು ಉಚಿತ ಎಂಬುದು ಇವರ ವಾದ ಆಗಿತ್ತು. ಇದಕ್ಕೆ ಗೋಪಾಲಗೌಡ ಅವರು ಏಕೀಕರಣದ ತುರ್ತನ್ನು ಹಾಗೂ ಶೇಷಾದ್ರಿ ವರದಿಯ ಅಂಕಿ-ಅಂಶಗಳನ್ನು ಗಮನದಲ್ಲಿ ಇಟ್ಟುಕೊಂಡು –

> "ನನ್ನ ದೃಷ್ಟಿಯಲ್ಲಿ ಅವು 'ಬಹಳ ಹಿಂದುಳಿದಿವೆ'ಯೆಂದು ಹೇಳಿದ ಶಬ್ದ ಅಷ್ಟು ಸೂಕ್ತವಾಗಿ ತೋರಲಿಲ್ಲ. ಅಲ್ಲದೆ, ನಾನು ಮುಖ್ಯವಾಗಿ ಹೇಳುವುದೇನೆಂದರೆ ಅದು ಸರ್ಪ್ಲಸ್ ಪ್ರದೇಶವೇ, ಡಿಫಿಸಿಟ್ ಪ್ರದೇಶವೇ ಎಂಬ ಪ್ರಶ್ನೆಯೇ ನಮ್ಮನ್ನು ಬಾಧಿಸಕೂಡದು. ಕಾರಣ, ಮೈಸೂರು ಸಂಸ್ಥಾನವೇ ಈ ಹೊತ್ತು ೪೦೯ ಲಕ್ಷ ರೂಪಾಯಿಗಳ ಡಿಪಾಸಿಟ್ ಇಟ್ಟುಕೊಂಡಿದೆ. ಅಲ್ಲದೆ ಇಂಡಿಯಾ ದೇಶದಲ್ಲಿ ಈ ಹೊತ್ತು ಇರತಕ್ಕ ಪರಿಸ್ಥಿತಿಯನ್ನು ನೋಡುವುದಾದರೆ ಪಾರ್ಲಿಮೆಂಟಿನ ಬಜೆಟ್ಟು ಮತ್ತು ಎಲ್ಲಾ ಪ್ರಾಂತಗಳ ಬಜೆಟ್ಟುಗಳೂ ಕೊರತೆಯ ಬಜೆಟ್ಟುಗಳೇ ಆಗಿವೆ. ಆದ್ದರಿಂದ ಕರ್ನಾಟಕದ ಜನರು ಒಂದು ಆಡಳಿತಕ್ಕೆ ಒಳಪಡಬೇಕೆ, ಬೇರೊಂದು ಪ್ರಾಂತ್ಯವನ್ನು ನಿರ್ಮಾಣ ಮಾಡಬೇಕೆ ಎನ್ನುವ ಸಂದರ್ಭದಲ್ಲಿ ಹಣದ ಪ್ರಶ್ನೆ ನಮ್ಮ ಮುಂದೆ ನಿಲ್ಲುವುದೇ ಇಲ್ಲ. ಏಕೆಂದರೆ, ಈ ಹೊತ್ತು ನಾವು ಹಣವನ್ನು ಹಂಚಿಕೊಳ್ಳುವುದಕ್ಕೆ ಮಾತ್ರ ನಿಂತಿಲ್ಲ. ಬಹುಕಾಲ ಬದುಕಿ ಬಾಳುವುದಕ್ಕೆ ಅದೊಂದು ಸಾಧನವೇ ಹೊರತು ಅದೇ ಒಂದು ಗುರಿಯಲ್ಲ. ಕನ್ನಡ ಜನರು ಮೈಸೂರಿನೊಡನೆ ಸೇರುವುದಾದರೆ ಅಥವಾ ಮೈಸೂರು ಸೇರಿದ ಒಂದು ಕನ್ನಡ ಪ್ರಾಂತ್ಯವಾದರೆ ನಮ್ಮ ಆಶೋತ್ತರಗಳು ಮುಗಿದು ಅದೇ ಅಂತಿಮ ಗುರಿಯೆಂದು ನಾವು ಭಾವಿಸುವುದಿಲ್ಲ. ಆ ಪ್ರದೇಶದಲ್ಲಿರತಕ್ಕ ಜನರ ಬಾಳು ಹಸನಾಗ ಬೇಕಾದರೆ ಅವರೂ ಮುಂದೆ ಬಾಳಿ ಬದುಕಿ ಅಭಿವೃದ್ಧಿಯಾಗ ಬೇಕಾದರೆ ಒಂದು ಪ್ರಾಂತ್ಯವಾಗುವುದರ ಅವಶ್ಯಕತೆ ಇದೆ."[೬೧]

- ಎಂದು ಹೇಳುವುದರ ಮೂಲಕ ಅನೇಕರ ಮನಸ್ಸನ್ನು ಬದಲಾಯಿಸಲು ಪ್ರಯತ್ನಿಸಿದರು. ಇದರ ಪರಿಣಾಮ ಆಗದೆ ಇರಲಿಲ್ಲ. ಅನೇಕರು ತಮ್ಮ ನಾಯಕರ ಅಥವಾ ಜಾತಿ ಮುಂದಾಳುಗಳ ಪರಿವರ್ತಿತ ಹೇಳಿಕೆಗಳ ಬಗ್ಗೆ ಮರುಚಿಂತನೆ ಮಾಡಿದರು. ಇದರಿಂದ ಏಕೀಕರಣಕ್ಕೆ ಮೈಸೂರಿಗರು ನಿಧಾನವಾಗಿ ಸಮ್ಮತಿಸಲಾರಂಭಿಸಿದ್ದರು. ಆದರೆ, ಎಲ್ಲರೂ ಅಲ್ಲ ಹಾಗೂ ಸಂಪೂರ್ಣವಾಗಿಯೂ ಅಲ್ಲ.

ಕನ್ನಡಿಗರನ್ನೂ ಒಳಗೊಂಡಂತೆ ಇತರೆ ಭಾಷಿಕರನ್ನೂ ಇಂಡಿಯಾದಾದ್ಯಂತ ಸಂಚರಿಸಿ, ಸಂದರ್ಶಿಸಿದ ಆಯೋಗ ತನ್ನ ಸಮಗ್ರ ವರದಿಯನ್ನು ೩೦.೯.೧೯೫೫ ರಂದು ಕೇಂದ್ರ ಸರ್ಕಾರಕ್ಕೆ ಸಲ್ಲಿಸಿತು.[೮೨] ಸರ್ಕಾರವು ವರದಿಯನ್ನು ಪರಿಶೀಲಿಸಿ ಸಾರ್ವಜನಿಕರ ಅವಗಾಹನೆಗೆ ತಂದದ್ದು ೧೦.೧೦.೧೯೫೫ ರಂದು. ಈ ವರದಿಯು ಕನ್ನಡ ಭೂಪ್ರದೇಶಗಳನ್ನು ಒಳಗೊಂಡ ಹೊಸ ಮೈಸೂರು ರಾಜ್ಯದ ನಿರ್ಮಾಣಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ವಿವರಗಳನ್ನು ನೀಡಿತ್ತು.

ಅ. ೧೯೫೩ ರಲ್ಲಿ ಆಂಧ್ರ ನಿರ್ಮಾಣವಾಗುವ ಸಂದರ್ಭದಲ್ಲಿ ಸೇರಿಕೊಂಡಿದ್ದ ಬಳ್ಳಾರಿ ಜಿಲ್ಲೆ (ಸಿರುಗುಪ್ಪ, ಬಳ್ಳಾರಿ, ಹೊಸಪೇಟೆ ತಾಲ್ಲೂಕುಗಳನ್ನು ಹಾಗೂ ಮಲ್ಲಾಪುರಂ ಉಪ ತಾಲ್ಲೂಕಿನ ಸಣ್ಣ ಭಾಗವೊಂದನ್ನು ಹೊರತುಪಡಿಸಿ) ಹಾಗೂ ಹಳೆಯ ಮೈಸೂರು ಸಂಸ್ಥಾನದ ಜಿಲ್ಲೆಗಳು.

ಆ. ಮುಂಬಯಿ ಕರ್ನಾಟಕದ ಆಡಳಿತದಲ್ಲಿನ ನಾಲ್ಕು ಕನ್ನಡ ಮಾತನಾಡುವ ಜಿಲ್ಲೆಗಳಾದ ಬಿಜಾಪುರ, ಧಾರವಾಡ, ಉತ್ತರ ಕನ್ನಡ ಹಾಗೂ ಬೆಳಗಾವಿ (ಚಂದಗಢ ತಾಲ್ಲೂಕನ್ನು ಬಿಟ್ಟು) ಜಿಲ್ಲೆಗಳು.

ಇ. ಹೈದರಾಬಾದ್ ಸಂಸ್ಥಾನದಲ್ಲಿದ್ದ ರಾಯಚೂರು (ಆಲಂಪುರ, ಗದ್ವಾಲ ತಾಲ್ಲೂಕುಗಳನ್ನು ಹೊರತುಪಡಿಸಿ), ಗುಲ್ಬರ್ಗಾ (ಕೋಡಂಗಲ್, ತಾಂದ್ರಿ ತಾಲ್ಲೂಕುಗಳನ್ನು ಹೊರತುಪಡಿಸಿ), ಬೀದರ್ (ಇದರಲ್ಲಿ ಹಿಂದಿನ ಬೀದರ್, ಕೊಮೆರಿಲಿ, ಭಾಲ್ಕಿ, ಸಂತಪುರ ಅಥವಾ ಔರಧ್‌ಗಳನ್ನು ಒಳಗೊಂಡಂತೆ ಹುಮನಾಬಾದಿನ ತಾಲ್ಲೂಕುಗಳು ಹೊಸದಾಗಿ ಸೇರಿಕೊಂಡಿದ್ದವು) ಜಿಲ್ಲೆಗಳು.

ಈ. ಮದರಾಸಿ (ಬ್ರಿಟಿಷ್ ಕರ್ನಾಟಕದ)ನ ದಕ್ಷಿಣ ಕನ್ನಡ (ಕಾಸರಗೋಡು ತಾಲ್ಲೂಕು ಹಾಗೂ ಅಮಿನದಿವಿ ದ್ವೀಪಗಳನ್ನು ಹೊರತುಪಡಿಸಿ) ಜಿಲ್ಲೆ.

ಉ. ಕೊಳ್ಳೇಗಾಲ ತಾಲ್ಲೂಕನ್ನು ಕನ್ನಡ ಪ್ರದೇಶವೆಂದು ಸಾರಿ (ಮದರಾಸಿನ ಕೊಯಂಮತ್ತೂರು ಜಿಲ್ಲೆಯಿಂದ) ಮೈಸೂರಿಗೆ ಸೇರಿಸಲಾಯಿತು.

ಊ. ಕೊಡಗು (ಹಿಂದಿನ ಚೀಫ್ ಕಮೀಷನರ್ ಆಳ್ವಿಕೆಯ ಕೊಡಗು ರಾಜ್ಯವನ್ನು ಇಡಿಯಾಗಿ) ಜಿಲ್ಲೆ.[೮೩]

ರಾಜ್ಯಗಳ ಪುನರ್ಘಟನಾ ಆಯೋಗದ ಈ ವಿಭಾಗ ಕ್ರಮ ಕನ್ನಡಿಗರಿಗೆ ನಿರೀಕ್ಷಿಸಿದಷ್ಟು ಸಂತಸ ತಂದುಕೊಟ್ಟಿರಲಿಲ್ಲ. ಏಕೆಂದರೆ 'ಬಳ್ಳಾರಿ ಜಿಲ್ಲೆಯ ಸಮಸ್ಯೆ'ಯನ್ನು ಮತ್ತೆ ಕೆದಕಲಾಗಿತ್ತು. ಆಂಧ್ರ ನಿರ್ಮಾಣ ಆಗುವಾಗಲೇ ಕೆ.ಎನ್. ವಾಂಚೂ ಮತ್ತು ಎಲ್.ಎಸ್. ಮಿಶ್ರ ವರದಿಗಳನ್ನು ಪರಿಗಣಿಸಿ ಬಳ್ಳಾರಿಯನ್ನು ಇಡಿಯಾಗಿ 'ಕನ್ನಡ ಪ್ರದ್ರೇಶ'ವೆಂದು ಸಾರಿ ಮೈಸೂರಿಗೆ ಸೇರಿಸಲಾಗಿತ್ತು. ಆದರೆ ಈ ಆಯೋಗವು ತನ್ನ ವರದಿಯಲ್ಲಿ ಬಗೆಹರಿದಿದ್ದ ವಿಚಾರವನ್ನು ಮತ್ತೆ ತೆಗೆದದ್ದು ಸರಿ ಅನ್ನಿಸಿರಲಿಲ್ಲ. ಜೊತೆಗೆ ಇದು ಕನ್ನಡಿಗರ ಸಹನೆಯನ್ನು ಪ್ರಶ್ನಿಸಿತ್ತು. ಹೀಗಾಗಿ ಬಳ್ಳಾರಿ ಹಾಗೂ ಇತರೆ ತಾಲ್ಲೂಕುಗಳನ್ನು ಮತ್ತೆ ಸೇರಿಸಲು ಚಳವಳಿಗಳು ಆರಂಭವಾದವು. ಬಳ್ಳಾರಿಯಲ್ಲಿ ತೀವ್ರರೂಪದ ಪ್ರತಿಕ್ರಿಯೆಗಳು ಕಾಣಿಸಿಕೊಳ್ಳದೆ ಇರಲಿಲ್ಲ. ಮತ್ತೆ ಕನ್ನಡ ಮತ್ತು ತೆಲುಗು ಭಾಷಿಕರ ಸಂಘರ್ಷಗಳು ಆರಂಭವಾಗಿದ್ದವು. ಕೇಂದ್ರ ಸರ್ಕಾರದ ವಿರುದ್ಧ ಭಿನ್ನ ಭಿನ್ನವಾದ ಪ್ರತಿಭಟನೆಗಳನ್ನು ಜನರು ಕೈಗೊಂಡರು. ತುಂಗಭದ್ರಾ ಅಣೆಕಟ್ಟಿನ ಹಾಗೂ ಪ್ರಾಜೆಕ್ಟಿನ ಮುಖ್ಯ ಕೇಂದ್ರವಿದ್ದ ಭಾಗಗಳನ್ನೆ ಆಂಧ್ರಕ್ಕೆ ಸೇರಿಸುವ ಉಪಾಯವನ್ನು ಫಜಲಾಲಿ ಆಯೋಗ ಮಾಡಿತ್ತು. ಅಲ್ಲದೆ ಈ ವರದಿಯನ್ನೂ ಒಳಗೊಂಡಂತೆ ಅದುವರೆವಿಗೂ ಆರು ಭಾರಿ ಬಳ್ಳಾರಿ ಬಗ್ಗೆ ವಿಚಾರಣೆಗಳು ನಡೆದಿದ್ದವು. ಬಹುಶಃ ಇಂಡಿಯಾದ ಯಾವುದೇ ಭಾಷಿಕ ಪ್ರದೇಶದ ಮೇಲೂ ಇಷ್ಟು ಭಾರಿ ಚರ್ಚೆಗಳು ನಡೆದಿರಲಿಲ್ಲ. ಅಚ್ಚಗನ್ನಡ ಪ್ರದೇಶವಾದ ಕಾಸರಗೋಡನ್ನು ಕೇರಳಕ್ಕೆ ಸೇರಿಸಿದ್ದು ಬಳ್ಳಾರಿ ಪ್ರಶ್ನೆಯೊಂದಿಗೆ ಸೇರಿ ಕೊಂಡಿತು. ಹೀಗಾಗಿ ಪ್ರತಿಕ್ರಿಯೆಗಳು ಉಗ್ರ ರೂಪಕ್ಕಿಳಿದವು.

ಫಜಲಾಲಿ ವರದಿ ಪ್ರಕಟಣೆಯಿಂದ ಎರಡು ರೀತಿಯ ನಿಲುವುಗಳನ್ನು ತೆಗೆದುಕೊಳ್ಳಲು ಕನ್ನಡಿಗರಿಗೆ ಸಾಧ್ಯ ಆಯಿತು. ಅಂದರೆ, ಮೊದಲನೆಯದು ಬಿಟ್ಟು ಹೋಗಿರುವ ಕನ್ನಡ ಪ್ರದೇಶಗಳಿಗಾಗಿ ತೀವ್ರ ಪ್ರಯತ್ನ ನಡೆಸುವುದು. ಎರಡನೆಯದಾಗಿ ಫಜಲ್ ಅಲಿ ವರದಿಯ ಸಣ್ಣಪುಟ್ಟ ಪರಿಷ್ಕರಣೆಯೊಂದಿಗೆ ಏಕೀಕೃತ ಕರ್ನಾಟಕಕ್ಕೆ ಬರುವ ವಿರೋಧಗಳನ್ನು ಬಗೆಹರಿಸಿಕೊಳ್ಳುವುದು. ಈ ನಿಟ್ಟಿನಲ್ಲಿ ಪ್ರಯತ್ನಗಳು ಆಗದಿರಲಿಲ್ಲ. ಬಳ್ಳಾರಿ ಜಿಲ್ಲಾ

ಕಾಂಗ್ರೆಸ್ ಅಧ್ಯಕ್ಷ **ಟೇಕೂರು ಸುಬ್ರಹ್ಮಣ್ಯಂ** ಅವರು ವರದಿ ಪ್ರಕಟವಾದ ದಿನದಂದು ಅದು ನಿರಾಧಾರಗಳಿಂದ ಕೂಡಿದೆ ಹಾಗೂ ಪ್ರಜಾಪ್ರಭುತ್ವಕ್ಕೆ ವಿರುದ್ಧವಾದ ಶಿಫಾರಸ್ಸುಗಳನ್ನು ಮಾಡಿದೆ ಎಂದು ಟೀಕಿಸಿದರು. ಅಲ್ಲದೆ ಈ ಬಗ್ಗೆ ಗೊತ್ತುವಳಿಯೊಂದನ್ನು ತೆಗೆದುಕೊಳ್ಳಲು ಮಾರನೆಯ ದಿನ (೧೧.೧೦.೧೯೫೫) ಕೆ.ಪಿ.ಸಿ.ಸಿ.ಯು **ಬಿಜಾಪುರದಲ್ಲಿ** ವಿಶೇಷ ಸಭೆ ಕರೆದಿತ್ತು. ಅಧ್ಯಕ್ಷರಾಗಿದ್ದ **ಅಂಬಲಿ ಚನ್ನಬಸಪ್ಪ** ಅವರು 'ಕರ್ನಾಟಕದ ಉಗಮಸ್ಥಾನ' ವಾಗಿದ್ದ ಬಳ್ಳಾರಿ ಬಗ್ಗೆ ಈ ರೀತಿಯ ನಿಲುವು ತೆಗೆದುಕೊಂಡದ್ದು ನಿರಾಧಾರವಾದದ್ದು ಎಂದು ಗೊತ್ತುವಳಿ ಸ್ವೀಕರಿಸಿದರು. **ಧಾರವಾಡದ** ಕಡಪ ಬಯಲಿನಲ್ಲಿ ಸಭೆ ಸೇರಿದ ಜನರು 'ಬಳ್ಳಾರಿ ನಮ್ಮದು' ಎಂಬ ಫಲಕಗಳನ್ನಿಡಿದು ಪ್ರತಿಭಟಿಸಿದರು. **ಬೆಳಗಾವಿ, ಮಂಗಳೂರುಗಳಲ್ಲೂ** ಸಹ ಬಳ್ಳಾರಿ ಹಾಗೂ ಕಾಸರಗೋಡುಗಳು ಕನ್ನಡ ನಾಡಿಗೆ ಸೇರಲೇಬೇಕು ಎಂಬ ಸಭೆಗಳು ನಡೆದವು. ಕೇಂದ್ರ ಹಾಗೂ ಕಾಂಗ್ರೆಸ್ಸಿಗರ ನೀತಿಯನ್ನು ಪ್ರತಿಭಟಿಸಿ ಅನೇಕ ರಾಜಕೀಯ ಪಕ್ಷಗಳು ಜನರನ್ನು ಸಂಪೂರ್ಣ ಏಕೀಕರಣಕ್ಕಾಗಿ ಸಜ್ಜುಗೊಳಿಸಿದವು. **ಹುಬ್ಬಳ್ಳಿಯಲ್ಲಿ** ಕಮ್ಯುನಿಸ್ಟ್ ಪಕ್ಷದ **ಎ.ಜೆ. ಮುಧೋಳ** ಅವರು **ನೆಹರೂ** ಅವರ ನೀತಿಯನ್ನು ಖಂಡಿಸಿ ರೈಲುಗಳನ್ನು ನಿಲ್ಲಿಸಿದರು. ಪಕ್ಷವು **ಹೊಸಮನಿ** ಸಿದ್ಧಪ್ಪನವರ ನೇತೃತ್ವದಲ್ಲಿ ಸಭೆ ಸೇರಿತು. ಅಲ್ಲಿ ಕಾರ್ಯದರ್ಶಿಗಳಾಗಿದ್ದ **ಉಪಾಧ್ಯಾಯ** ಅವರು ಬಹಿರಂಗವಾಗಿಯೇ ಕಾಂಗ್ರೆಸ್ ಧುರೀಣ **ಹಳ್ಳಿಕೇರಿ** ಅವರನ್ನು ತರಾಟೆಗೆ ತೆಗೆದುಕೊಂಡಿದ್ದರು.

'ಅಕರಾನಿ ಪರಿಷತ್ತಿ'ನವರು ೧೨.೧೦.೧೦೫೫ ರ ದಿನವನ್ನು ಬಳ್ಳಾರಿ ದಿನವನ್ನಾಗಿ ಆಚರಿಸಲು ಕರೆಕೊಟ್ಟರು. ಈ ಸಂದರ್ಭದಲ್ಲಿ ಸಾರ್ವಜನಿಕವಾಗಿ ಅಳವಂಡಿಯ **ಶಿವಮೂರ್ತಿ ಸ್ವಾಮಿಗಳು** ಕನ್ನಡಿಗರ ಸ್ವಾಭಿಮಾನವನ್ನು ಪರೀಕ್ಷಿಸುತ್ತಿರುವ ಕೇಂದ್ರದ ಧೋರಣೆಯನ್ನು ಟೀಕಿಸಿ, ಕನ್ನಡ ಸಂಸತ್ ಸದಸ್ಯರು ರಾಜೀನಾಮೆ ಕೊಟ್ಟು ಪ್ರತಿಭಟಿಸುವರು ಎಂದು ಮನವರಿಕೆ ಮಾಡಿಕೊಟ್ಟರು. ಅಲ್ಲದೆ ಕೇಂದ್ರವು ಬಲವಂತವಾಗಿ ಬಳ್ಳಾರಿಯನ್ನು ಆಂಧ್ರಕ್ಕೆ ಸೇರಿಸಿದ್ದೇ ಆದಲ್ಲಿ ಸಹಕಾರಕ್ಕೆ ಬದಲಾಗಿ ವಿರೋಧಗಳನ್ನು ಎದುರಿಸಬೇಕಾಗಿ ಬರಬಹುದು ಎಂಬುದು ಇವರ ಎಚ್ಚರಿಕೆ ಆಗಿತ್ತು. ಸಂಡೂರಿನ ಮಹಾರಾಜರು ಸಹ ವರದಿ ಬಗ್ಗೆ ತಮ್ಮ ಅಸಮಾಧಾನವನ್ನು (೧೭.೧೦.೧೯೫೩ ರಂದು) ವ್ಯಕ್ತಪಡಿಸಿದರು.

ಮರಾಠಿಗರು **ಬೆಳಗಾವಿಯನ್ನು** ಕರ್ನಾಟಕಕ್ಕೆ ಸೇರಿಸಿದ್ದುದರ ಬಗ್ಗೆ ಹಿಂಸಾಚಾರಕ್ಕೂ ಇಳಿದು ಪ್ರತಿಭಟಿಸುತ್ತಿದ್ದರು. ಈ ಜಿಲ್ಲೆಯು ಮಹಾರಾಷ್ಟ್ರಕ್ಕೆ ಸೇರಬೇಕು ಎಂದು ಅವರು

ನಡೆಸುತ್ತಿದ್ದ ಪ್ರಯತ್ನಗಳ ಬಗ್ಗೆ ಮಣಿಯದಿರಲು ರಾಷ್ಟ್ರಪತಿಗಳನ್ನು **ಗಂಗಾಧರ ರಾವ್ ದೇಶಪಾಂಡೆ** ಕೇಳಿಕೊಂಡಿದ್ದರು. **ಬೆಳವಿ ದತ್ತರರಾಯರದು** ಇಂಥ ಪ್ರಯತ್ನಗಳಿಗೆ ಸೋಲು ಖಚಿತ ಎಂಬ ಧೋರಣೆ. **ಅಣ್ಣೂ ಗುರೂಜಿ** ಅವರು ತಾತ್ವಿಕವಾಗಿ ಬೆಳಗಾಂ ಕರ್ನಾಟಕದ ಭಾಗವೇ ಆಗಿದೆ ಎಂಬುದನ್ನು ಸಾಬೀತು ಪಡಿಸಿದರು.[೬೪] ಬೆಳಗಾಂ ಪ್ರಶ್ನೆ, ಬಳ್ಳಾರಿ ಪ್ರಶ್ನೆಗೆ ತದ್ವಿರುದ್ಧವಾಗಿತ್ತು. ಇಲ್ಲಿ ಮರಾಠಿಗರು ಕನ್ನಡ ಪ್ರದೇಶವನ್ನು ಕೇಳಿದರೆ, ಬಳ್ಳಾರಿಯಲ್ಲಿ ತೆಲುಗರು ಕೇಳುತ್ತಿದ್ದರು.

**ಫಜಲ್ ಆಲಿ ವರದಿ** ಬಗ್ಗೆ ಕನ್ನಡ ಭೂಪ್ರದೇಶಗಳಲ್ಲಿ ಪ್ರತಿಕ್ರಿಯೆ, ಚರ್ಚೆ, ಪ್ರತಿಭಟನೆಗಳು ನಡೆಯುತ್ತಿದ್ದ ಸಂದರ್ಭದಲ್ಲಿ ಮೈಸೂರಿನಲ್ಲಿ ಮೈಸೂರಿಗರ ನಿಲುವುಗಳು ಕುತೂಹಲವನ್ನುಂಟು ಮಾಡಿದ್ದವು. ಅಂದರೆ ಈ ಘಟ್ಟದಲ್ಲಿ ಉತ್ತರದ ಕನ್ನಡ ಪ್ರದೇಶ ಗಳೊಂದಿಗೆ ಮೈಸೂರಿನ ಏಕೀಕರಣ ಖಚಿತವೆಂದು ಮನವರಿಕೆಗೆ ಬರುತ್ತಿತ್ತು. ಇದರಿಂದ ವಿಚಲಿತರಾಗದ ಮೈಸೂರಿನ ಬಹುಪಾಲು ಕಾಂಗ್ರೇಸ್ ಶಾಸಕರು ಬಹಿರಂಗವಾಗಿ ವಿರೋಧಗಳನ್ನು ವ್ಯಕ್ತಪಡಿಸಲಾರಂಭಿಸಿದರು. ಇದಕ್ಕೆ ಬೇರೆ ಕಾರಣಗಳು ಇಲ್ಲದಿಲ್ಲ. ಅಂದರೆ ಮುಂದೆ ಬರಲಿದ್ದ ಚುನಾವಣೆಗಳಲ್ಲಿ ಸೀಟು ದೊರಕಿಸಿಕೊಳ್ಳುವ ಲಾಭ ನಡೆದಿತ್ತು. ಹೀಗಾಗಿ ಕೇಂದ್ರದಲ್ಲಿದ್ದ ಧುರೀಣರ ನಿಲುವಿಗೆ ವಿರೋಧ ವ್ಯಕ್ತಪಡಿಸದೆ ಹೆಚ್ಚು ನಿಷ್ಠೆ ವ್ಯಕ್ತಪಡಿಸಬೇಕಿತ್ತು. ರಾಜ್ಯದಿಂದ ಕೇಂದ್ರಕ್ಕೆ ಹೋಗಿದ್ದ **ಕೆ.ಸಿ. ರೆಡ್ಡಿ** ಅವರಿಗೂ ಮುಖ್ಯಮಂತ್ರಿ **ಕೆಂಗಲ್ಲರಿಗೂ** ರಾಜಕೀಯವಾದ ತಾರತಮ್ಯಗಳು ಇದ್ದವು. ಅಷ್ಟೇ ಅಲ್ಲದೆ ಮೈಸೂರು ಕಾಂಗ್ರೇಸ್ಸಿನ ಅಧ್ಯಕ್ಷರಾಗಿದ್ದ **ಸಾಹುಕಾರ್ ಚೆನ್ನಯ್ಯ** ಅವರು ಕೆ.ಸಿ. ರೆಡ್ಡಿ ಅವರೊಂದಿಗೆ ನಿಕಟ ಸಂಬಂಧವಿಟ್ಟುಕೊಂಡಿದ್ದರು. ಹೀಗಾಗಿ ಇಲ್ಲಿನ ಕಾಂಗ್ರೇಸ್ ಶಾಸಕರು ಪ್ರಧಾನಿ ನೆಹರು, ಕೆ.ಸಿ. ರೆಡ್ಡಿ, ಫಜಲ್ ಆಲಿ ವರದಿಗಳಿಗೆ ವಿರೋಧ ವ್ಯಕ್ತಪಡಿಸು ಪಂತಿರಲಿಲ್ಲ. ಮೈಸೂರು ಕಾಂಗ್ರೇಸ್ಸಿಗರ ಇಂಥ ಗೋಸುಂಬೆತನಗಳಿಂದ ಬೇಸತ್ತಿದ್ದ ಕೆಂಗಲ್ಲರಿಗೆ ಹಾಗೂ ಅವರ ಅನುಯಾಯಿಗಳಿಗೆ ಏಕೀಕರಣಕ್ಕಾಗಿ ಸಂಘಟಿಸುವುದು ತೊಡಕಿನ ಸಂಗತಿ ಆಗಿತ್ತು. ಅಲ್ಪಸಂಖ್ಯಾತ ಏಕೀಕರಣವಾದಿ ಶಾಸಕರು ಕೆಂಗಲ್ಲರಿಗೆ ನಿಷ್ಠರಾಗಿದ್ದರೂ ಎರಡು ಬಣಗಳಂತು ಕಾಂಗ್ರೇಸಿನಲ್ಲಿದ್ದವು ಎಂಬುದು ಸ್ಪಷ್ಟ. ಹೀಗಾಗಿ ಕೆಂಗಲ್ಲರು ಏಕೀಕರಣದ ಬಗ್ಗೆ ಗೊಂದಲದ ಹೇಳಿಕೆಗಳನ್ನು ಕೊಟ್ಟುಬಿಡುತ್ತಿದ್ದರು. ಉದಾಹರಣೆಗೆ ಹಿಂದೆ ಶೇಷಾದ್ರಿ ವರದಿ ಬಗ್ಗೆ ಚರ್ಚಿಸುವಾಗ **ಕೆಂಗಲ್ಲರು** -

> "ಸಮಿತಿ ಒದಗಿಸಿರುವ ಅಂಕಿ-ಅಂಶಗಳು........ ಕರ್ನಾಟಕ ಏಕೀಕರಣದ ವಿರುದ್ಧವಾಗಿವೆ......... ಈ ಸಮಿತಿಯ ನೇಮಕಾತಿ ಯನ್ನು ನೀವು ಗಮನಿಸಿದರೆ ನಾನು ಈ ವಿಷಯದ ಬಗ್ಗೆ ಯಾವ ರೀತಿಯ ಅಭಿಪ್ರಾಯ ಹೊಂದಿದ್ದೇನೆ ಎನ್ನುವುದು ಸ್ಪಷ್ಟವಾಗುತ್ತದೆ."

ಎಂದು ನುಡಿದು ಫಜಲ್ ಆಲಿ ವರದಿ ಪ್ರಕಟವಾದ ಸಂದರ್ಭದಲ್ಲಿ -

> "ಎಲ್ಲ ಕಾಲಕ್ಕೂ ನಾನು ಮೈಸೂರಿನ ವಿಸ್ತರಣೆಯನ್ನು ಮಾತ್ರ ಬೆಂಬಲಿಸುತ್ತಿದ್ದೇನೆ"[೬೫]

- ಎಂದೂ ಹೇಳಿಕೆ ನೀಡಿ ಹೆಚ್ಚಿನ ಗೊಂದಲಗಳಿಗೆ ಕಾರಣರಾಗಿದ್ದರು. ನಿಖರವಿಲ್ಲದ ಹೇಳಿಕೆಗಳನ್ನು ನೀಡುತ್ತಿದ್ದ ಕೆಂಗಲ್ಲರನ್ನು ಕುರಿತು ಬೆಂಗಳೂರಿನ ದೈನಿಕವೊಂದು ತನ್ನ ಸಂಪಾದಕೀಯದಲ್ಲಿ ಛೇಡಿಸಿ ಏಕೀಕರಣ ಬಗ್ಗೆ ನಿಶ್ಚಿತ ನಿಲುವೊಂದನ್ನು ತಾಳಲು ಕರೆಕೊಟ್ಟಿತ್ತು.[೬೬]

ಮುಖ್ಯಮಂತ್ರಿಗಳ ಗೊಂದಲದ ಹೇಳಿಕೆಗಳು ಸಂಪುಟದ ಸದಸ್ಯರಿಗೆ ಹೆಚ್ಚಿನ ಸ್ವಾತಂತ್ರ್ಯವನ್ನು ಒದಗಿಸಿಕೊಟ್ಟಿದ್ದವು. ಕೆಲವು ಶಾಸಕರು 'ಕೆಂಗಲ್ಲರು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿ ಏಕೀಕರಣ ವಿಚಾರವನ್ನು ಮುಂದಿಟ್ಟುಕೊಂಡು ಮತ್ತೆ ಗೆದ್ದು ಬರಲಿ' ಎಂದು ಸವಾಲು ಹಾಕಿದರು. ಮತ್ತೆ ಕೆಲವರು ಏಕೀಕರಣ ವಿಚಾರವನ್ನೇ 'ಜನಮತ ಗಣನೆ'ಗೆ ಹಾಕಲಿ ಎಂಬ ವಾದವನ್ನು ಮುಂದಿಟ್ಟರು.[೬೭] ಶಾಸಕರಾಗಿದ್ದ **ಕಡಿದಾಳ್ ಮಂಜಪ್ಪ, ಟಿ. ಚೆನ್ನಯ್ಯ, ಎ.ಜಿ. ರಾಮಚಂದ್ರರಾವ್, ಎಂ.ಪಿ.ಎಲ್. ಶಾಸ್ತ್ರಿ** ಮೊದಲಾದವರು ಏಕೀಕರಣಕ್ಕೆ ವಿರುದ್ಧವಾದ ಹೇಳಿಕೆಗಳನ್ನು ನೀಡುತ್ತಿದ್ದುದು ಉಂಟು. "ಏಕೀಕರಣದ ವಿಚಾರವಾಗಿ ಮುಖ್ಯಮಂತ್ರಿ ಕೆಂಗಲ್ಲರು ನೀಡುತ್ತಿರುವ ಹೇಳಿಕೆಗಳು ಸಂಪುಟದ ಒಮ್ಮತ ಅಭಿಪ್ರಾಯವಲ್ಲ, ಬದಲಾಗಿ ಅವರ ಸ್ವಂತದ್ದು" ಎಂಬುದಾಗಿ **ಟಿ. ಚೆನ್ನಯ್ಯ** ಅವರು ಬಹಿರಂಗವಾಗಿ ಹೇಳಿದರು. ಕೆಂಗಲ್ಲರಿಗೂ ಹಾಗೂ ಎ.ಜಿ. ರಾಮಚಂದ್ರರಾವ್ ಅವರಿಗೂ ಈ ಕುರಿತು ಮಾತಿನ ಸಂಘರ್ಷಗಳಾಗದೆ ಇರಲಿಲ್ಲ.[೬೮] ಏಕೀಕರಣ ಮೊದಲಿನಿಂದಲೂ ಪರವಾಗಿದ್ದ **ಎಚ್.ಸಿ. ದಾಸಪ್ಪ** ಮತ್ತು **ಎ.ಜಿ. ರಾಮಚಂದ್ರರಾವ್** ಫಜಲ್ ಆಲಿ ವರದಿ ಪ್ರಕಟ ಆದ ಮೇಲೆ ವಿರೋಧಿಗಳಾಗಿ ಬದಲಾಗಿದ್ದರು. ಈ ರೀತಿಯ ನಿಲುವು, ಸಂಘರ್ಷಗಳಿಂದ ಮೈಸೂರೇತರರಿಗೆ

ಅಸಮಾಧಾನವಾಗಿ, ಏಕೀಕರಣವು ಸಾಧ್ಯ ಆಗುವುದಿಲ್ಲ ಎಂಬ ಅನುಮಾನ ಮೂಡಿತು. ಇಂಥ ಅನುಮಾನ, ಆತಂಕಗಳ ಸಂದರ್ಭದಲ್ಲಿಯೇ ಕುವೆಂಪು ಅವರು ಕನ್ನಡಿಗರು ತಾವು ವಾಸಿಸುತ್ತಿರುವ ತಾಣಗಳನ್ನೇ 'ಕರ್ನಾಟಕ' ಎಂದು ಭಾವಿಸಿಕೊಳ್ಳಲು ('ನೀ ಮೆಟ್ಟುವ ನೆಲ ಅದೆ ಕರ್ನಾಟಕ') ತಮ್ಮ ಕವಿತೆಗಳಲ್ಲಿ ಕರೆ ನೀಡಿದ್ದು. ಸಚಿವ ಸಂಪುಟದವರೆ ಏಕೀಕರಣಕ್ಕೆ ವಿರುದ್ಧವಾಗಿದ್ದುದು ಕೆಂಗಲ್ಲರಿಗೆ ಮತ್ತು ಅವರ ಕೆಲವೇ ಅನುಯಾಯಿಗಳಿಗೆ ಸವಾಲಾಗಿ ಪರಿಣಮಿಸಿತು.

ಮೈಸೂರು ಕಾಂಗ್ರೆಸ್ಸಿಗರ ಆಂತರಿಕವಾದ ತಿಕ್ಕಾಟಗಳು, ಭಿನ್ನಾಭಿಪ್ರಾಯಗಳು ಕೇಂದ್ರದ ಗಮನಕ್ಕೆ ಬಂದು ಈ ಬಗ್ಗೆ ತೀರ್ಮಾನಿಸಲು ಒಂದು ಉಪ ಸಮಿತಿಯನ್ನು ರಚಿಸಿತು. ಕಾಂಗ್ರೆಸ್ ಕಾರ್ಯಕಾರಿ ಸಮಿತಿ ರಚಿಸಿದ ಈ ಸಮಿತಿಯಲ್ಲಿ ಜವಹರ್‌ಲಾಲ್ ನೆಹರು, ಗೋವಿಂದವಲ್ಲಭ್ ಪಂತ್, ಮೌಲಾನಾ ಅಬ್ದುಲ್ ಕಲಾಮ್ ಆಜಾದ್ ಹಾಗೂ ದೇಬರ್ ಅವರುಗಳು ಇದ್ದರು. ಈ ಸಮಿತಿ ವರದಿ ನೀಡುವುದಕ್ಕೆ ಹೆಚ್ಚು ಸಮಯ ತೆಗೆದು ಕೊಳ್ಳುತ್ತಿತ್ತು. ಅಷ್ಟರೊಳಗಾಗಿ ಕೇಂದ್ರದ ನಾಯಕರ ಆದೇಶದ ಮೇರೆಗೆ ದೆಹಲಿಯಿಂದ ವಾಪಾಸ್ಸು ಬಂದ ಎಸ್. ಚೆನ್ನಯ್ಯ ಅವರು ಬಹಿರಂಗ ಹೇಳಿಕೆಯೊಂದನ್ನು ನೀಡಿದರು. ಅದು, ಕೇಂದ್ರದಲ್ಲಿನ ತಮ್ಮ ನಾಯಕರು ಕರ್ನಾಟಕ ಏಕೀಕರಣದ ಬಗೆಗೆ ಬದ್ಧರಾಗಿ ತೀರ್ಮಾನ ತೆಗೆದುಕೊಂಡಿದ್ದಾರೆ ಎಂಬುದಾಗಿತ್ತು.[೮] ಆಗ ಸಾಹುಕಾರ್ ಚೆನ್ನಯ್ಯ ಅವರು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರೂ ಹೌದು. ಫಜಲ್ ಆಲಿ ವರದಿ ಬಗ್ಗೆ (ಏಕೀಕರಣದ ಬಗ್ಗೆ) ಹಾಗೂ ಕೆಂಗಲ್ಲರನ್ನು ವಿರೋಧಿಸುತ್ತಿದ್ದವರಿಗೆ ಈ ಸಂದರ್ಭದಲ್ಲಿ ಹೆಚ್ಚಿನ ಅಸಮಾಧಾನ ಆಗದಿರಲಿಲ್ಲ. ಹೀಗಾಗಿ ಕೇಂದ್ರದ ನಾಯಕರು ತೆಗೆದುಕೊಂಡ ನಿರ್ಧಾರದ ಬಗ್ಗೆ ಬಹಿರಂಗವಾಗಿ ಕಟು ಹೇಳಿಕೆಗಳನ್ನು ನೀಡಲಾರಂಭಿಸಿದರು. (ಬಿ.ಕೆ. ಪುಟ್ಟರಾಮಯ್ಯ ಮೊದಲಾದವರು). ಫಜಲ್ ಆಲಿ ವರದಿ ಬಗ್ಗೆ ಚರ್ಚಿಸಲು ಹಾಗೂ ಮತಕ್ಕೆ ಹಾಕಲು ಸಂಪುಟದ ಸದಸ್ಯರ ಸಭೆಯೊಂದನ್ನು ಕರೆಯಲಾಯಿತು. ಇದರಲ್ಲಿ ವಿರೋಧಿಗಳು ಏಕೀಕರಣದ ಬಗ್ಗೆ ಮನಸ್ಸು ಬದಲಾಯಿಸಿದರು. ಏಕೆಂದರೆ ಮುಂದೆ ಬರಲಿರುವ ಚುನಾವಣೆಯಲ್ಲಿ ಸೀಟು ದಕ್ಕಿಸಿಕೊಳ್ಳಲು. ಆದೂ ಅಲ್ಲದೆ ಮುಖ್ಯಮಂತ್ರಿಗಳು ಏಕೀಕರಣದ ಬಗ್ಗೆ ಕೇಂದ್ರದ್ದೇ ಅಂತಿಮ ತೀರ್ಮಾನವೆಂದು ಘೋಷಿಸಿದ್ದರಿಂದ. ವರದಿಯನ್ನು ಮತಕ್ಕೆ ಹಾಕಿದಾಗ ಅರ್ಧಕ್ಕೆ ಅರ್ಧದಷ್ಟು ಶಾಸಕರು ಗೈರು ಹಾಜರಾದರೆ ಮತ್ತೆ ಕೆಲವರು ಮೌನವಹಿಸಿ ಎಂದಿನ 'ಮೈಸೂರುತನ'ವನ್ನು ಪ್ರದರ್ಶಿಸಿದರು.

ಫಜಲ್ ಆಲಿ ಸಮಿತಿಯನ್ನು ರಚಿಸಿದ ದಿನದಿಂದಲೂ ಮೈಸೂರು ಅನೇಕರಲ್ಲಿ ಅಸಮಾಧಾನ ಇದ್ದೇ ಇತ್ತು. ಮಾಜಿ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ಅವರು ಈ ಆಯೋಗವನ್ನು ನೇಮಿಸಿದಾಗ 'ನೆಹರು ಅತಿಯಾಗಿ ಮುಂದುವರೆಯುತ್ತಿದ್ದಾರೆ' ಎಂದಿದ್ದರು.[೮೦] ಅದೇ ರೀತಿಯಲ್ಲಿ 'ಎರಡು ಕರ್ನಾಟಕ'ಗಳಿಗೆ ಒತ್ತಾಯಿಸುತ್ತಿದ್ದ ಮೈಸೂರುವಾದಿ ಡಿ.ವಿ. ಗುಂಡಪ್ಪ ಅವರು ಏಕೀಕರಣವು ಖಚಿತವಾಗುತ್ತಿದ್ದುದರ ಹಿನ್ನೆಲೆಯಲ್ಲಿ 'ದೆಹಲಿ ಪ್ರಾಮಾಣಿಕವಾದ ಹಾಗೂ ಪ್ರಜಾಸತ್ತಾತ್ಮಕವಾದ ರೀತಿಯಲ್ಲಿ ವರ್ತಿಸುತ್ತಿಲ್ಲ' ಎನ್ನುವುದರ ಮೂಲಕ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರು.[೮೧] ಮಾಜಿ ದಿವಾನರುಗಳಾಗಿದ್ದ ಎನ್. ಮಾಧವರಾವ್ ಮತ್ತು ಅರ್ಕಾಟ್ ರಾಮಸ್ವಾಮಿ ಮೊದಲಿಯಾರುಗಳು ಕೇಂದ್ರವು ಕರ್ನಾಟಕ ಏಕೀಕರಣವನ್ನು ಮಾಡಲು ಹೊರಟಿದ್ದುದರ ಬಗ್ಗೆ ಟೀಕೆಗಳನ್ನು ಮಾಡಿದರು. ಇವರಿಗೆಲ್ಲಾ ಮೈಸೂರಿನ ವ್ಯಾಮೋಹ ಹಾಗೂ ಮಾದರಿ ಸಂಸ್ಥಾನದ ಅಭಿಮಾನಗಳು ಬಹಳ ಗಾಢವಾಗಿದ್ದವು. ಅಷ್ಟೇ ಅಲ್ಲದೆ ಮೈಸೂರಿಗರಲ್ಲಿ ಅನೇಕರಿಗೆ ಈ ಘಟ್ಟದಲ್ಲಿ ನೆಹರು ನಿಲುವುಗಳು ಸಹಿಸದಾಗಿದ್ದವು. ಕುತೂಹಲದ ಸಂಗತಿ ಅಂದರೆ ಸ್ವಾತಂತ್ರ್ಯದ ಆಸುಪಾಸಿನ ಕಾಲಘಟ್ಟದಲ್ಲಿ ಉತ್ತರ ಕರ್ನಾಟಕದ ಕನ್ನಡಿಗರಿಗೆ ಏಕೀಕರಣದ ವಿಚಾರದಲ್ಲಿನ ನೆಹರು ನಿಲುವುಗಳು ಹಿಡಿಸಿರಲಿಲ್ಲ.[೮೨] ಡಿಸೆಂಬರ್ ೧೯೫೫ರ ವೇಳೆಗೆ ಹಿಂದೆ ನೇಮಿಸಿದ್ದ ಉಪ ಸಮಿತಿ (ನೆಹರು ಮೊದಲಾದವರು) ತನ್ನ ವರದಿಯನ್ನು ಪ್ರಕಟಿಸಿತು. ಅದು ಮೈಸೂರು ಮೈಸೂರಿನವರಿಗಾಗಿ ಎಂಬ ವಾದವನ್ನು ಸಾರಾಸಗಟಾಗಿ ತಳ್ಳಿಹಾಕಿತ್ತು. ಅಲ್ಲದೆ ಮೈಸೂರನ್ನು ಒಳಗೊಂಡ ಒಂದೇ ಕರ್ನಾಟಕದ ರಚನೆಗೆ ಬೆಂಬಲ ನೀಡಲಾಗಿತ್ತು. ಇದರಿಂದ ಎರಡು, ಮೂರು ಕರ್ನಾಟಕಗಳ ವಾದಗಳು ಕುಸಿದವು. ಅಲ್ಲದೆ ಕೆಂಗಲ್ಲರು ಫಜಲ್ ಆಲಿ ವರದಿ ಬಗ್ಗೆ ವಿಧಾನ ಮಂಡಲದಲ್ಲಿ ಸಭೆ ಕರೆದಿದ್ದ ಸಂದರ್ಭದಲ್ಲಿ ಬಹುಪಾಲು ಶಾಸಕರು ವಿರೋಧಗಳನ್ನು ವ್ಯಕ್ತಪಡಿಸಿ ಏಕಾಭಿಪ್ರಾಯಕ್ಕೆ ಬರಲು ಅಡ್ಡಿ ಮಾಡಿದರು. ನವೆಂಬರ್-ಡಿಸೆಂಬರ್ (೧೯೫೫) ವೇಳೆಯಲ್ಲಿ ಮೈಸೂರು ವಾದಿಗಳು ಹಿಂಸಾತ್ಮಕ ಚಳವಳಿ, ಪ್ರದರ್ಶನ, ದೊಂಬಿಗಳನ್ನು ಆರಂಭಿಸಿದ್ದರು. ತುಮಕೂರು, ಬೆಂಗಳೂರು ನಗರದಲ್ಲಿ ತೀವ್ರ ವಿರೋಧಗಳು ಕಂಡುಬಂದವು.[೮೩] ಕೆಲವು ಸ್ವಾರ್ಥಿ ರಾಜಕಾರಣಿಗಳಿಂದ ದೂರವಿದ್ದ ಶಾಸಕರು ಏಕೀಕರಣದ ಪರವಾಗಿಯೇ ಇದ್ದರು.

ಮುಖ್ಯಮಂತ್ರಿ ಕೆಂಗಲ್ಲರು ಎಲ್ಲ ವಿರೋಧಗಳ ಮಧ್ಯೆಯು ಏಕೀಕರಣದ ಆಶಯಕ್ಕಾಗಿ ಹೆಣಗಾಡಿದರು. ಇವರು ಮತ್ತು ಇವರ ಅನುಯಾಯಿಗಳು ವಿರೋಧಿಗಳನ್ನು ಒಲಿಸಿ

ಕೊಳ್ಳುವುದರಲ್ಲಿ ಹಲವು ಬಗೆಯಲ್ಲಿ ಪ್ರಯತ್ನಪಟ್ಟಿದ್ದಾರೆ. ಆದ್ದರಿಂದಲೇ "ಮೈಸೂರು ಮೈಸೂರಾಗಿಯೇ ಉಳಿಯಲಿ" ಎಂದು ಚಳವಳಿ ನಡೆಸಿದ್ದ ಮುಂದಾಳುಗಳಲ್ಲಿ ಒಬ್ಬರಾದ ಎ. ರಾಮಣ್ಣ ಅವರು -

> "ಶ್ರೀ ಹನುಮಂತಯ್ಯನವರಿಲ್ಲದಿದ್ದರೆ ಮೈಸೂರು ದೇಶ ಒಂದಾಗುತ್ತಿರ ಲಿಲ್ಲ. ಇಂದು ರಾಜ್ಯದ ಹೆಸರು ಕರ್ನಾಟಕವಾಗುವುದಕ್ಕೆ ಅವಕಾಶವಾಗು ತ್ತಿರಲಿಲ್ಲ.......... ವಿಲೀನ ವಿರೋಧಿಗಳು ದೇಶದಲ್ಲಿ ಒಂದು ಆಂದೋಳನವನ್ನೇ ಆರಂಭಿಸಿದರು. ಮಂಡ್ಯದಲ್ಲಿ ಭಾರಿ ವಿಲೀನ ವಿರೋಧಿ ಸಮ್ಮೇಳನ ನಡೆಯಿತು. ಇಂದು ಕರ್ನಾಟಕವೆಂದು ಯಾರು ಹೆಸರಿಡಲು ನಿರ್ಣಯಿಸಿದರೋ ಅವರು ಅಂದು ಪ್ರಬಲ ವಿರೋಧಿಗಳಾಗಿದ್ದರು. ಆದರೆ ಹನುಮಂತಯ್ಯನವರ ದಿಟ್ಟತನದಿಂದ ತನ್ನ ಮಂತ್ರಿ ಮಂಡಲಿಯ ಮೂವರು ಸದಸ್ಯರ ವಿರೋಧವಿದ್ದರೂ ಕರ್ನಾಟಕವಾಗಲೇಬೇಕೆಂಬ ತೀರ್ಮಾನಕ್ಕೆ ಬಂದು, ಅಸೆಂಬ್ಲಿಯಲ್ಲಿ ಗೊತ್ತುವಳಿ ಪಾಸು ಮಾಡಿದರು. ಅದರಿಂದಾಗಿ ಅವರು ತಮ್ಮ ಮುಖ್ಯಮಂತ್ರಿ ಪದವಿಯನ್ನು ಕಳೆದುಕೊಳ್ಳ ಬೇಕಾಯಿತು. ಅಷ್ಟೇ ಅಲ್ಲದೆ, ಕರ್ನಾಟಕದಲ್ಲಿ ಅವರು ಚೇತರಿಸಿ ಕೊಳ್ಳಬೇಕಾದರೆ ಸುಮಾರು ೧೪ ವರ್ಷಗಳು ಬೇಕಾಯಿತು."[೬೪]

- ಎಂದಿರುವುದು. ಫಜಲ್ ಆಲಿ ವರದಿಯ ಮೇಲೆ ನಡೆದ ಸಭೆಯಲ್ಲಿ ಎರಡು ಪ್ರಮುಖ ನಿರ್ಣಯಗಳನ್ನು ಅಂಗೀಕರಿಸಲಾಯಿತು. ಅವು, ಮೈಸೂರಿನಿಂದ ಬಳ್ಳಾರಿಯನ್ನು ಬೇರ್ಪಡಿಸದಿರುವ ಹಾಗೂ ಹೊಸದಾಗಿ ರೂಪುಗೊಳ್ಳಲಿರುವ ರಾಜ್ಯಕ್ಕೆ ಮೈಸೂರು ರಾಜ್ಯ ಎಂದು ಕರೆಯುವ ನಿರ್ಣಯಗಳು. ಎಂದಿಗೂ ಏಕೀಕರಣಕ್ಕಾಗಿ ತೀವ್ರ ಚಳವಳಿಯನ್ನು ಮಾಡದಿದ್ದ ಮೈಸೂರು ಸಂಸ್ಥಾನಿಕರನ್ನು ಏಕೀಕರಣಕ್ಕಾಗಿ ಮನವೊಲಿಸುವಲ್ಲಿ ಕೆಂಗಲ್ಲರು ಮಾಡುತ್ತಿದ್ದ ಪ್ರಯತ್ನಗಳು ಗಮನೀಯ.

ಕೇಂದ್ರ ಸರಕಾರವು ಭಾಷಾವಾರು ಪ್ರಾಂತ್ಯಗಳ ಬಗ್ಗೆ ಮಸೂದೆಯೊಂದನ್ನು ಸಿದ್ಧ ಮಾಡಿ (೧೬.೧.೧೯೫೬) ವಿದ್ಯುಕ್ತವಾಗಿ ಲೋಕಸಭೆ ಮತ್ತು ರಾಜ್ಯಸಭೆಗಳ ಮುಂದೆ ಇಟ್ಟಿದ್ದು ೧೬.೩.೧೯೫೬ ರಂದು. ಈ ಮಸೂದೆಯಲ್ಲಿ ಹದಿನೈದು ರಾಜ್ಯಗಳ ಹಾಗೂ ಏಳು ಕೇಂದ್ರಾಡಳಿತ ಪ್ರದೇಶಗಳ ರಚನೆಯ ಭವಿಷ್ಯ ಇತ್ತು. ಸಂಬಂಧಪಟ್ಟ ರಾಜ್ಯ ಗಳೆಲ್ಲವಕ್ಕೂ ಈ ಮಸೂದೆಯನ್ನು ಕಳುಹಿಸಿಕೊಡಲಾಗಿತ್ತು. ಅಂದರೆ ಈ ಬಗ್ಗೆ ಅವರು

ಅಭಿಪ್ರಾಯ ನೀಡಬೇಕಿದ್ದುದು ಒಂದು ತಿಂಗಳ ಗಡುವಿನೊಳಗೆ. ಈ ಮಸೂದೆಯನ್ನು ಗಮನಿಸಿ ಮೈಸೂರು ಸರಕಾರವು ಬಳ್ಳಾರಿ ಬಗ್ಗೆ ತನ್ನ ಅಚಲವಾದ ನಿಲುವನ್ನು ತಿಳಿಸಿತ್ತು. ಇದನ್ನು ಗಣನೆಗೆ ತೆಗೆದುಕೊಂಡ ಕೇಂದ್ರ ಸರಕಾರ ಬಳ್ಳಾರಿ ಬಗ್ಗೆ-

> "ತುಂಗಭದ್ರಾ ಯೋಜನೆಯು ಕಾರ್ಯದಕ್ಷತೆಯಿಂದ ಮತ್ತು ನಿರಾತಂಕವಾಗಿ ನಡೆಯುಂತೆ ಮಾಡಲು ಬಳ್ಳಾರಿ ಜಿಲ್ಲೆಯ ಕೆಲವು ಭಾಗ ಗಳನ್ನು ಆಂಧ್ರ ಪ್ರದೇಶಕ್ಕೆ ವರ್ಗಾಯಿಸಬೇಕೆಂದು ರಾಜ್ಯ ಪುನರ್ನಿರ್ಮಾಣ ಸಮಿತಿ ಸೂಚಿಸಿತಷ್ಟೆ. ಈ ಯೋಜನೆಯಲ್ಲಿ ರಾಯಲಸೀಮೆಯ ಜನರಿಗೆ ಅತ್ಯಂತ ಆಸ್ಥೆ ಇದೆಯೆಂಬುದನ್ನು ಭಾರತ ಸರ್ಕಾರ ಮಾನ್ಯ ಮಾಡುತ್ತದೆ. ಆದರೆ ಈ ಧ್ಯೇಯ-ಸಾಧನೆಗೆ ಸಮಿತಿ ಸೂಚಿಸಿರುವಂತೆ ಕೆಲವು ಪ್ರದೇಶಗಳನ್ನು ವರ್ಗಾಯಿಸುವುದು ಅನಾವಶ್ಯಕವೆಂಬ ಅಭಿಪ್ರಾಯಕ್ಕೆ ಭಾರತ ಸರ್ಕಾರ ಬಂದಿದೆ. ಆಂಧ್ರ ಸರ್ಕಾರ ಮಹತ್ವ ಕೊಡುತ್ತಿರುವ ತುಂಗಭದ್ರಾ ಮೇಲ್ಮಟ್ಟದ ಕಾಲುವೆ ಯೋಜನೆಯಾದರೂ ಸರಿಯೆಂದು ಸರ್ಕಾರಕ್ಕೆ ಕಂಡುಬಂದಿದೆ. ಈ ಯೋಜನೆ ತ್ವರಿತವಾಗಿ ಮತ್ತು ಸಮಾಧಾನಕರವಾಗಿ ಆಚರಣೆಗೆ ಬರುವಂತೆ ಮಾಡಲು ಅವಶ್ಯ ಕ್ರಮ ಗಳನ್ನು ಕೈಗೊಳ್ಳುವುದೇ ಭಾರತ ಸರ್ಕಾರದ ಉದ್ದೇಶವಾಗಿದೆ. ಆದ್ದರಿಂದ ಸಮಿತಿ ತನ್ನ ಸೂಚನೆ ಮಾಡುವಾಗ ಯಾವ ಉದ್ದೇಶವನ್ನಿಟ್ಟುಕೊಂಡಿತ್ತೋ ಅದನ್ನು, ಪ್ರದೇಶಗಳನ್ನು ವರ್ಗಾಯಿಸದೆ ಅಥವಾ ಈ ಮೊದಲು ವಿವರವಾದ ವಿಚಾರಣೆಗಳ ಅನಂತರ ಬಗೆಹರಿದಿರುವ ಬಳ್ಳಾರಿ ಪ್ರಶ್ನೆ ಯನ್ನು ಪುನಃ ಎತ್ತದೆ, ಸಾಧಿಸಲಾಗುವುದು."[೬೫]

- ಎಂಬ ನಿರ್ಣಯವನ್ನು ತೆಗೆದುಕೊಳ್ಳುವುದರೊಂದಿಗೆ ಈ ಸಮಸ್ಯೆಯನ್ನು ಬಗೆಹರಿಸಿತು. ಅಂತೆಯೇ ರಾಜ್ಯದ ನಾಮಕರಣದ ಬಗ್ಗೆ ಮೈಸೂರು ರಾಜ್ಯವೆಂದೇ ಇರಲಿ ಎಂದು ನಿರ್ಧರಿಸಲಾಯಿತು. ಈ ಘಟ್ಟದಲ್ಲಿ ಮೈಸೂರಿಗರು ಭಾವನಾತ್ಮಕವಾಗಿ 'ಮೈಸೂರು' ಎಂಬ ಹೆಸರಿನಲ್ಲಿ ತಮ್ಮನ್ನು ತಾವು ಗುರುತಿಸಿಕೊಳ್ಳತೊಡಗಿದರು. ಆದರೆ ಮೈಸೂರೇತರ ಎಲ್ಲ ಕನ್ನಡಿಗರು ಸಾಂಸ್ಕೃತಿಕವಾಗಿ ದತ್ತವಾಗಿರುವ **ಕರ್ನಾಟಕ** ಎಂದು ಕರೆಯಲು ಪಟ್ಟು ಹಿಡಿದಿದ್ದರು. ಈ ಬಗ್ಗೆ ಮೈಸೂರು ವಿಧಾನ ಮಂಡಲದಲ್ಲಷ್ಟೇ ಅಲ್ಲದೆ ಅನೇಕ ಕಡೆ ವಾದ-ವಿವಾದಗಳಾದವು. ನಾಮಕರಣ ಗೊತ್ತುವಳಿಯನ್ನು

ಮತಗಣನೆಗೆ ಹಾಕಲಾಯಿತು. ಅನೇಕ ಕಾಂಗ್ರೆಸ್ಸಿಗರು (ಮೈಸೂರಿನವರು) **ಕರ್ನಾಟಕ** ಎಂಬ ಹೆಸರಿಗೆ ವಿರುದ್ಧ ಮತ ಹಾಕುವುದಾಗಿ ಬಹಿರಂಗಪಡಿಸಿದರು. ಈ ಸಂದರ್ಭದಲ್ಲಿ (೨.೪.೧೯೫೬) **ಶಾಂತವೇರಿ ಗೋಪಾಲಗೌಡರು ಕರ್ನಾಟಕ** ಎಂಬ ಹೆಸರನ್ನು ಉಳಿಸಿಕೊಳ್ಳಲು ಪ್ರಯತ್ನಪಟ್ಟದ್ದು ಗಮನಾರ್ಹ. ಈ ಸಂದರ್ಭವನ್ನು **ರಾವ್ ಬಹದ್ದೂರ** ಅವರು -

> "ಗೋಪಾಲಗೌಡರು ಅಂದಾನಪ್ಪ ದೊಡ್ಡಮೇಟಿಯವರು ಮಂಡಿಸಿದ ಗೊತ್ತುವಳಿಗೆ ಸೋಲೆಂಬುದು ಅಸಂಭವ, ಹಳೆ ಮೈಸೂರಿನ ಕಾಂಗ್ರೆಸ್ ಸದಸ್ಯರು ವಿರುದ್ಧ ಮತ ಹಾಕಿದರೂ ಸಮಾಜವಾದಿಗಳು ಗೊತ್ತುವಳಿಗೆ ಅನುಕೂಲ ಮತ ಹಾಕುವರು. ಅದುದರಿಂದ ಗೊತ್ತುವಳಿ ಬಿದ್ದು ಹೋಗುವುದೆಂಬ ಭಯಕ್ಕೆ ಅವಕಾಶವಿಲ್ಲ. ಅದು ಬಹುಮತದಿಂದ ಪಾಸಾಗುವಂತೆ ನಾನು ನೋಡಿಕೊಳ್ಳುವೆ.[೯೭]

- ಎಂದು ಹೇಳಿದ್ದರು." ಎಂದು ನೆನಪು ಮಾಡಿಕೊಂಡಿದ್ದಾರೆ. ಫಜಲ್ ಆಲಿ ವರದಿಯಲ್ಲೂ **ಕರ್ನಾಟಕ**ವೆಂದೇ ಕರೆಯಲಾಗಿತ್ತು. ಮೈಸೂರುವಾದಿಗಳು **ಮೈಸೂರು** ಎಂಬ ಹೆಸರನ್ನು ಬದಲಾಯಿಸಲು ಹೊರಟರೆ ಹಿಂದಿನಿಂದಲೂ ಹೊರಡಿಸಿರುವ ಶಾಸನಗಳ ಹೆಸರನ್ನು ಬದಲಾಯಿಸಬೇಕಾದ ತೊಡಕುಗಳಿವೆ ಎಂದು ತಕರಾರು ತೆಗೆದರು. ಇದಕ್ಕೆ ಕೆಂಗಲ್ಲರು -

> "ಅದೇನೂ ದೊಡ್ಡ ಕಷ್ಟವಲ್ಲ- ಕೇವಲ ಒಂದೇ ಹಾಳೆಯ ಮಸೂದೆಯನ್ನು ಮಂಡಿಸಿ ಎಲ್ಲೆಲ್ಲಿ 'ಮೈಸೂರು' ಎಂದು ಇದೆಯೋ ಅಲ್ಲೆಲ್ಲಾ 'ಕರ್ನಾಟಕ' ಎಂದು ಸೇರಿಸಿ ಬಿಡಬಹುದು, ಐದು ನಿಮಿಷಗಳ ಕೆಲಸ"[೯೭]

- ಎಂಬುದಾಗಿ ಉತ್ತರಿಸಿದರು. ಆದರೂ ಕೊನೆಗೆ ಉಳಿದದ್ದು **ಮೈಸೂರು** ಎಂಬ ಹೆಸರೆ.

ಆಯಾ ರಾಜ್ಯಗಳಿಂದ ಬಂದ ಅಭಿಪ್ರಾಯಗಳನ್ನು ಪರಿಶೀಲಿಸಿ ಪರಿಷ್ಕರಿಸಿದ ಮಸೂದೆಯನ್ನು ಅಂಗೀಕಾರಕ್ಕಾಗಿ ಇಡಲಾಯಿತು. ಇದಕ್ಕೆ **ಲೋಕಸಭೆ** (೧೦.೬.೧೯೫೬) ಮತ್ತು **ರಾಜ್ಯಸಭೆ** (೨೫.೮.೧೯೫೬)ಗಳೆರಡು ತಮ್ಮ ತಮ್ಮ ಒಪ್ಪಿಗೆ ನೀಡಿದವು. ಈ ಮಸೂದೆಯು ೩೧.೮.೫೬ ರಂದು ರಾಷ್ಟ್ರಪತಿಗಳ ಸಹಿಯೊಂದಿಗೆ ಕಾಯಿದೆ ಆಯಿತು. ಈ ಕಾಯಿದೆನ್ವಯ

೧.೧೧.೧೯೫೬ ರಂದು ಹೊಸ ರಾಜ್ಯ ಅಸ್ತಿತ್ವಕ್ಕೆ ಬಂದಿತು. ಬೆಂಗಳೂರಿನಲ್ಲಿ ನವೆಂಬರ್ ೧ ರಂದು ರಾಷ್ಟ್ರಪತಿ **ಬಾಬು ರಾಜೇಂದ್ರಪ್ರಸಾದ್** ಅವರು ರಾಜ್ಯ ರಚನೆ ಬಗ್ಗೆ ಅಧಿಕೃತವಾಗಿ ಘೋಷಿಸಿದರು. ಈ ಸಮಾರಂಭದಲ್ಲಿ ಹೊಸ ಮುಖ್ಯಮಂತ್ರಿ **ಎಸ್. ನಿಜಲಿಂಗಪ್ಪ** ಹಾಗೂ ರಾಜ್ಯಪಾಲ **ಜಯಚಾಮರಾಜೇಂದ್ರ ಒಡೆಯರು** ಉಪಸ್ಥಿತರಿದ್ದರು. ಇದರಿಂದ ಛಿದ್ರವಾಗಿದ್ದ ಕನ್ನಡ ಆಡಳಿತ ಘಟಕಗಳು ಹಾಗೂ ಕನ್ನಡಿಗರು ಒಂದೇ ಆಡಳಿತದ ತೆಕ್ಕೆಗೆ ಬಂದರು. ಇದರ ಹಿಂದಿನ ದಿನ (೩೧.೧೦.೧೯೫೬)ವೆ ಉತ್ತರ ಕರ್ನಾಟಕದ ಕನ್ನಡಿಗರು **ಆಲೂರ ವೆಂಕಟರಾವ್, ಕೆ.ಎಫ್. ಪಾಟೀಲ, ಮಂಗಲಗಿ, ರಾಯಚೂರಿನ ಶ್ರೀಕಂಠಯ್ಯ, ವಿಜಯೇಂದ್ರರಾವ್, ವಿಜಯೋಂದ್ರಯೋಗಿಗಳು, ಬುರ್ಲಿ ಶೇಷಣ್ಣ, ಕೃಷ್ಣಕುಮಾರ ಕಲ್ಲೂರ, ನಾರಾಯಣ ಸಂಗಮ** ಮೊದಲಾದವರ ನೇತೃತ್ವದಲ್ಲಿ ಹಂಪಿಯಲ್ಲಿ ನೆರೆದಿದ್ದರು. ಹಂಪಿಯಲ್ಲಿ ತಾಯಿ **ಭುವನೇಶ್ವರಿ** ಹಾಗೂ ಶ್ರೀ ವಿದ್ಯಾರಣ್ಯರ ಸನ್ನಿಧಿಯಲ್ಲಿ 'ನವರಾಜ್ಯೋತ್ಸವ'ವನ್ನು ಆಚರಿಸುವುದು ಉಚಿತವೆಂಬುದು ಇವರೆಲ್ಲರ ಅಭಿಮತ. ಸಾಂಕೇತಿಕವಾಗಿ ಎಲ್ಲರೂ ಇಲ್ಲಿ (ಹಂಪಿ) ಕಲೆತು, ಭಾವನಾತ್ಮಕವಾಗಿ ಬೆರೆತು ಮಧ್ಯರಾತ್ರಿಯವರೆಗೂ ಪೂಜೆ ಇತ್ಯಾದಿಗಳೊಂದಿಗೆ ಉತ್ಸವವನ್ನು ಆಚರಿಸಿದರು.

ಕನ್ನಡ ನಾಡನ್ನು **ಮೈಸೂರು ರಾಜ್ಯ**ವೆಂದು ಕರೆದದ್ದು ಮೈಸೂರಿಗರಿಗೆ ಸಂತಸ ತಂದುಕೊಟ್ಟಿತ್ತು. ಆದರೆ ಇನ್ನಾವ ಕನ್ನಡ ಪ್ರದೇಶಗಳ ಜನರೂ ಇದನ್ನು ಇಷ್ಟ ಪಟ್ಟಿರಲಿಲ್ಲ. ನಾಡಿಗೆ ಸಾಂಸ್ಕೃತಿಕವಾಗಿ ಶತಮಾನಗಳಿಂದಲೂ ಬಂದಿದ್ದ ಹಾಗೂ ಕರೆದಿದ್ದ 'ಕರ್ನಾಟಕ' ವನ್ನು ಉಳಿಸಿಕೊಳ್ಳದೆ ಇದ್ದುದು ಸ್ವಾಭಿಮಾನದ ಪ್ರಶ್ನೆಯಾಗಿತ್ತು. **ಆಲೂರರು, ಜಯದೇವಿ ತಾಯಿ ಲಿಗಾಡೆ, ಕಲ್ಯಾಣ ಶೆಟ್ಟಿ, ಕಲ್ಲೂರ** ಮೊದಲಾದವರು ಬಹಳಷ್ಟು ಅಸಮಾಧಾನಪಟ್ಟು ಕೊಂಡಿದ್ದರು. ಮೈಸೂರಿಗರ ಮುಂದಾಳತ್ವ, ಶ್ರೇಷ್ಠತೆಯ ಧೋರಣೆಗಳನ್ನು ಆರಂಭದಿಂದಲೂ ಟೀಕಿಸುತ್ತಲೇ ಬಂದಿದ್ದ **ಆಲೂರ ವೆಂಕಟರಾಯರು** ೧.೧೧.೧೯೫೬ ರಂದು ತಾವು ನೀಡಿದ ಸಂದೇಶದಲ್ಲಿ-

> "ಈಗ 'ಮೈಸೂರು ರಾಜ್ಯ'ವೆಂದು ತಪ್ಪಾಗಿ ಹೆಸರಿಸಲ್ಪಟ್ಟ 'ಕರ್ನಾಟಕ ರಾಜ್ಯ'ವು ಆಯುಷ್ಮಂವಾಗಲಿ ಆರೋಗ್ಯವಂತವಾಗಲಿ ಮತ್ತು ಭಾಗ್ಯವಂತವಾಗಲಿ"[೮]

- ಎಂದು ಹರಿಸಿ **ಕರ್ನಾಟಕ**ವೆಂದೇ ಕರೆಯಲು ಕರೆಕೊಟ್ಟು, ಬಿಟ್ಟುಹೋದ ಕನ್ನಡ ಪ್ರದೇಶಗಳು ಬೇಗ ಸೇರಲಿ ಎಂದರು. ಅದೇ ರೀತಿಯಲ್ಲಿ **ಜಯದೇವಿತಾಯಿ ಲಿಗಾಡೆ** ಅವರು ಗಡಿ ಪ್ರದೇಶಗಳ ಸೇರಿಕೆ ಬಗ್ಗೆ ಗಮನ ಸೆಳೆಯಲು ಪ್ರಯತ್ನಪಟ್ಟರು. ಮಹಾರಾಷ್ಟ್ರೀಗರ ತೆಕ್ಕೆಗೆ ಹೋದ ಕನ್ನಡ ಪ್ರದೇಶಗಳನ್ನು ಕರ್ನಾಟಕಕ್ಕೆ ಹಿಂತಿರುಗಿಸಲು ಅವರು ಮರಾಠಿ ಭಾಷೆಯಲ್ಲಿಯೇ 'ಸಮೃದ್ಧ ಕರ್ನಾಟಕಾಂಚೀ ರೂಪರೇಷಾ' ಎಂಬ ಕೃತಿಯನ್ನು ರಚಿಸಿದ್ದನ್ನು ಗಮನಿಸಬಹುದು. ಕೃಷ್ಣಕುಮಾರ ಕಲ್ಲೂರರಂತು 'ಮೈಸೂರು' ಹೆಸರಿನಲ್ಲಿರುವುದು 'ಹೆಣ' ಎಂಬಂತೆ ಮಾತನಾಡಿದ್ದಾರೆ.[೯೯]

ಮೈಸೂರು ಸಂಸ್ಥಾನದ **ಕೆಂಗಲ್ ಹನುಮಂತಯ್ಯ, ಶಾಂತವೇರಿ ಗೋಪಾಲಗೌಡ** ಮೊದಲಾದವರಿಗೆ ನಾಮಕರಣದ ಅಸಮಾಧಾನವಾಗಿತ್ತು. ೧೯೫೫ ರಲ್ಲಿ ನಡೆದ ಸಾಹಿತ್ಯ ಸಮ್ಮೇಳನ (ರಾಯಚೂರು)ದಲ್ಲೂ ಈ ಬಗ್ಗೆ ನಿರ್ಣಯವನ್ನು ಅಂಗೀಕರಿಸಲಾಗಿತ್ತು. **ಹಂಪಿಯಲ್ಲಿ ರಾಜ್ಯೋದಯವನ್ನು** ಆಚರಿಸಿದಂತೆ ಹೊಸ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ಅವರು **ಬೆಂಗಳೂರಿನಲ್ಲಿ** ಅಧ್ಯಕ್ಷತೆ ವಹಿಸಿ ಆಚರಿಸಿದರು. ಈ ಸಂದರ್ಭದಲ್ಲಿ ಅವರು ಏಕೀಕರಣದಲ್ಲಿ 'ಪರಿಷತ್ತಿ'ನ ಪಾತ್ರವನ್ನು ಶ್ಲಾಘಿಸಿದರು.

ಹೊಸ **ಮೈಸೂರು ರಾಜ್ಯ** ಉದಯವಾದರೂ ಅನೇಕ ಕನ್ನಡ ಪ್ರದೇಶಗಳು ನೆರೆ ಹೊರೆಯ ರಾಜ್ಯಗಳಲ್ಲಿಯೇ ಉಳಿದುಕೊಂಡವು. ಅವುಗಳಲ್ಲಿ **ಕಾಸರಗೋಡು** (ಕೇರಳ), **ನೀಲಗಿರಿ, ಹೊಸೂರು, ತಾಳವಾಡಿ** (ಮದ್ರಾಸ್), **ಆಲೂರು, ಆದವಾನಿ, ರಾಯದುರ್ಗ, ಮಡಕಶಿರ** (ಆಂಧ್ರ ಪ್ರದೇಶ), **ದೇಗಲೂರು, ಸೊಲ್ಲಾಪುರ, ಜತ್, ಅಕ್ಕಲಕೋಟ, ಗಡಹಿಂಗ್ಲಜ** (ಮಹಾರಾಷ್ಟ್ರ) ಮೊದಲಾದವು ಕನ್ನಡಿಗರವಾಗಲಿಲ್ಲ.[೧೦೦]

**ಆಕರ - ಟಿಪ್ಪಣಿಗಳು**


೦೧. ಹುಚಿನ್‌ಸನ್, ಜ್ವಾನ್ ಮತ್ತು ಆಂಥೋಣಿ, ಡಿ. ಸ್ಮಿತ್ (ಸಂ.)., **ನ್ಯಾಷನಾಲಿಸಂ**, (ನ್ಯೂಯಾರ್ಕ್, ೧೯೯೪), ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಪು. ೫

೦೨. ಶ್ರೀನಿವಾಸ ಮಂಗಳವೇಡೆ ಮತ್ತು ನಾರಾಯಣ ಸಂಗಮ., **ಕರ್ನಾಟಕ ಏಕೀಕರಣ**, (ಹು, ೧೯೮೭) ಪು. ೯

೦೩. ಶಂಕರ ನಾರಾಯಣರಾವ್, ಎಸ್.ಪಿ., **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು**, (ಬೆಂಗಳೂರು, ೧೯೯೧), ಪು. ೧೫೨

೦೪. ನಿಜಲಿಂಗಪ್ಪ ಎಸ್., 'ಕರ್ನಾಟಕ ಏಕೀಕರಣ' (**ಕರ್ನಾಟಕ ಪರಂಪರೆ,** ಸಂ. ರಂ.ರಾ.ದಿವಾಕರ), (ಬೆಂ. ೧೯೯೨), ಪು. ೫೫೧

೦೫. 'ವಾಗ್ಭೂಷಣ' (ಮಾಸಿಕ)., (ನವೆಂಬರ್, ೧೮೯೬), ಮೊದಲ ಸಂಚಿಕೆಯಲ್ಲಿ ಹೇಳಿರುವ ಮಾತುಗಳು, (ಧಾರವಾಡ, ೧೮೯೬)

೦೬. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ., (೧೯೧೬-೧೭), ಸಂ-೧, ಸಂ-೧ (ಬೆಂ, ೧೯೧೭), ಇದರಲ್ಲಿನ ಪಂಡಿತ್ ಕೆ. ರಾಜಗೋಪಾಲ ಚಕ್ರವರ್ತಿ ಸರಳ ಕವಿಸೂರಿ ಅವರ ಲೇಖನವನ್ನು ಆಧಾರವನ್ನಾಗಿಸಿಕೊಳ್ಳಲಾಗಿದೆ.

೦೭. ನಂಬೂದರಿಪ್ಪಾದ್, ಇ.ಎಂ.ಎಸ್., ಎ **ಹಿಸ್ಟರಿ ಆಫ್ ಇಂಡಿಯನ್ ಫ್ರೀಡಂ ಸ್ಟ್ರಗಲ್,** (ತ್ರಿವೇಂದ್ರಂ, ಸೋಷಿಯಲ್ ಸೈಂಟಿಸ್ಟ್ ಪ್ರೆಸ್), ಪು. ೧೭೨, ಕರ್ಜನ್‌ನ ಮಾತುಗಳ ಕನ್ನಡಾನುವಾದವು ಎಸ್.ಪಿ. ಶಂಕರನಾರಾಯಣರು ತಮ್ಮ ಕೃತಿ 'ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು' (ಪು. ೧೮೨-೩) ಎಂಬುದರಲ್ಲಿ ಮಾಡಿದ್ದಾರೆ.

೦೮. ಅಯೋಧ್ಯಾಸಿಂಗ್., **ಭಾರತದ ರಾಷ್ಟ್ರೀಯ ಚಳವಳಿ,** (ಅನು. ಬಿ. ವಿಷ್ಣುಮೂರ್ತಿ) (ಮೈ, ೧೯೮೯) ಪು. ೧೩

೦೯. ದಿವಾಕರ ರಂ.ರಾ., **ಕರ್ನಾಟಕ ಏಕೀಕರಣ ಕಥೆ,** (ಹು, ೧೯೯೨), ಪು. ೨೨ (ಎರಡನೇ ಮುದ್ರಣ)

೧೦. Evidence Volume ೧೨೪ ರಲ್ಲಿರುವಂತೆ, ಕ.ರಾ. ಪತ್ರಾಗಾರ (ಬೆಂ)

೧೧. ಶಂಕರನಾರಾಯಣರಾವ್, ಎಸ್.ಪಿ., ಮೇಲಿನದೆ, ಪು. ೧೮೭

೧೨. ೧೯೦೮ ರ ಏಪ್ರಿಲ್ ೩೦ ರಂದು ಪ್ರಫುಲ್ಲ **ಜಾಕಿ** ಹಾಗೂ **ಖುದಿರಾಂ ಬೋಸ್** ಎಂಬ ಇಬ್ಬರು ಕ್ರಾಂತಿಕಾರಿಗಳು ಮೊಟ್ಟ ಮೊದಲ ಬಾರಿಗೆ ಬಾಂಬಿನ ದಾಳಿ ಮಾಡಿದ್ದರು. ಕಲ್ಕತ್ತೆಯ ಮಾಜಿ ಮ್ಯಾಜಿಸ್ಟ್ರೇಟ್ **ಕಿಂಗ್ಸ್ ಫರ್ಡ್‌**ನನ್ನು ಕೊಲ್ಲಲು ಎಸೆದ ಬಾಂಬಿನ ಪರಿಣಾಮವಾಗಿ ಆ ವಾಹನದಲ್ಲಿದ್ದ ಇಬ್ಬರು ಮಹಿಳೆಯರು ಬಲಿಯಾಗಬೇಕಾಯಿತು. ಆದರೆ ಅವನು ಅದರಲ್ಲಿ ಇರಲಿಲ್ಲ.

೧೩. ದಿವಾಕರ ರಂ.ರಾ., ಮೇಲಿನದೆ, ಪು. ೧೬

೧೪. ಮುಂದೆ ೧೯೩೦ ರಲ್ಲಿ 'ಸೈಮನ್ ಕಮಿಷನ್ನಿ'ನ ವರದಿ ಪ್ರಕಾರ ಬ್ರಿಟಿಷ್ ಪಾರ್ಲಿಮೆಂಟ್ 'ಸಿಂಧ್' ಮತ್ತು 'ಒರಿಸ್ಸಾ' ಎಂದು ಎರಡು ಪ್ರಾಂತ್ಯಗಳನ್ನು ಮಾಡಿತು. ೧೯೩೫ ರ ಭಾರತ ಸರ್ಕಾರದ ಕಾಯಿದೆಯಲ್ಲಿ ಈ ಬಗ್ಗೆ ವ್ಯವಸ್ಥೆ ಮಾಡಲಾಗಿ ಎರಡು ಪ್ರಾಂತ್ಯಗಳು ಹೊಸದಾಗಿ ಅಸ್ತಿತ್ವಕ್ಕೆ ಬಂದವು.

**ಕರ್ನಾಟಕ ಏಕೀಕರಣ ಹಾಗೂ ನಾಮಕರಣ ೮೪**

೧೫. ರಂಗಯ್ಯಂಗಾರ್, ಕೆ., 'ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಆಂದೋಲನ', (**ಕನ್ನಡದ ಕಾಲು ಶತಮಾನ,** ಸಂ; ಗೋಕಾಕ್, ವಿ.ಕೃ ಮತ್ತು ಇತರರು) (ಧಾ, ೧೯೬೫) ಪು. ೧೨೩-೨೪.

೧೬. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ., ಸಂಪುಟ-೨೫, ಸಂಚಿಕೆ-೨ (ಪರಿಷತ್ತಿನ ಬೆಳ್ಳಿಹಬ್ಬದ ವಿಶೇಷ ಸಂಚಿಕೆ), (ಬೆಂ, ೧೯೪೦) ಪು. ೧೧

೧೭. ಗೋವಿಂದರಾಜು, ಸಿ.ಆರ್., **ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು,** (ಬೆಂ, ೧೯೯೫), ಪು. ೫-೧೦ (ಪರಿಷತ್ತಿನ ಹುಟ್ಟು, ಧ್ಯೇಯ, ಚಟುವಟಿಕೆ, ಏಕೀಕರಣಕ್ಕೆ ಕೊಡುಗೆ ಇತ್ಯಾದಿಗಳನ್ನು ಈ ಕೃತಿಯಲ್ಲಿ ಚರ್ಚಿಸಲಾಗಿದೆ.)

೧೮. ಪಾಟೀಲ, ಕಲ್ಲನಗೌಡ., (೧೯೮೦), **ಕರ್ನಾಟಕ ಏಕೀಕರಣದ ಹಾದಿಯಲ್ಲಿ,** (ಹು, ೧೯೮೦) ಪು. ೧೦ (ಇವರೊಂದಿಗೆ ಸಂದರ್ಶನ ನಡೆಸಿ ಏಕೀಕರಣದ ಬಗೆಗೆ ಅನೇಕ ವಿಚಾರಗಳನ್ನು ದಾಖಲು ಮಾಡಿಕೊಳ್ಳಲಾಗಿದೆ.)

೧೯. ಮುಗಳಿ, ರಂ.ಶ್ರೀ., **ಅಧ್ಯಕ್ಷರ ಭಾಷಣಗಳು,** ಸಂಪುಟ ೧, (ಬೆಂ, ೧೯೯೦) ಪು. ೫೧-೫೨

೨೦. ಮುಗಳಿ ರಂ.ಶ್ರೀ., ಮೇಲಿನದೆ, ಪು. ೨೯, (ಎಚ್.ವಿ. ನಂಜುಂಡಯ್ಯ ಅವರ ಅಧ್ಯಕ್ಷೀಯ ಭಾಷಣದಲ್ಲಿ ಸ್ಪಷ್ಟಪಡಿಸಿರುವ ಹಿನ್ನೆಲೆಯಲ್ಲಿ)

೨೧. ವಾಗ್ಭೂಷಣ., ಪು. ೧೯೫-೧೯೬, (ಧಾ, ೧೯೧೭), ದಿನಾಂಕ ೭.೧೦.೧೯೧೭ ರಂದು ವಿದ್ಯಾವರ್ಧಕ ಸಂಘದ ವ್ಯವಸ್ಥಾಪಕ ಸಮಿತಿಯಲ್ಲಿ ಈ ಗೊತ್ತುವಳಿಯನ್ನು ಸ್ವೀಕರಿಸಿರುವುದು ದಾಖಲಾಗಿದೆ.

೨೨. ಸರ್ ಲೆಸ್ಲಿ ಮಿಲ್ಲರ್ ವರದಿ., (ಬೆಂ, ೧೯೧೯), ಪು. ೨೨, ಕರ್ನಾಟಕ ರಾಜ್ಯ ಪತ್ರಾಗಾರ

೨೩. "South Indian Liberal Federation" ಎಂಬ ಹೆಸರಿನಲ್ಲಿ ೧೯೧೭ ರ ಆಗಸ್ಟ್‌ನಲ್ಲಿ ಈ ಬ್ರಾಹ್ಮಣೇತರರ ಸಂಸ್ಥೆ ಹುಟ್ಟಿಕೊಂಡಿತ್ತು. ಮುಂದೆ ಇದು 'ಜಸ್ಟೀಸ್ ಪಾರ್ಟಿ' ಎಂದಾಯಿತು.

೨೪. ಆಲೂರ ವೆಂಕಟರಾಯರು, **ಕರ್ನಾಟಕತ್ವದ ವಿಕಾಸ,** (ಧಾ, ೧೯೫೭) ಪು. ೮೩-೮೪

೨೫. ಶ್ರೀನಿವಾಸ, ಮಂಗಳವೇಡೆ ಮತ್ತು ನಾರಾಯಣ, ಸಂಗಮ, (೧೯೪೬)., ಮೇಲಿನದೆ, ಪು. ೩೦

೨೬. ಆಲೂರ ವೆಂಕಟರಾಯರು, ಮೇಲಿನದೆ, ಪು. ೮೭

೨೭. ಆಲೂರ ವೆಂಕಟರಾಯರು, **ನನ್ನ ಜೀವನ ಸ್ಮೃತಿಗಳು,** (ಧಾ, ೧೯೭೪), ಪು. ೧೬೯, ಶಿವಲಿಂಗಪ್ಪ ಎಂಬ ಫೌಜುದಾರನು ಜನಸಂದಣಿ ಮೇಲೆ ಹಾರಿಸಿದ ಗುಂಡಿನಿಂದ ಮೂವರು ಬಲಿ ಆದರು.

೨೮. ಚಂದ್ರಶೇಖರ್, ಎಸ್., 'ಮೈಸೂರು ಮತ್ತು ಏಕೀಕೃತ ಕರ್ನಾಟಕದ ರಚನೆ: ೧೯೩೭-೧೯೫೬' (**ಸಾಧನೆ** ಸಂಪುಟ-೧೨, ಸಂಚಿಕೆ-೪) (ಬೆಂ. ೧೯೮೩) ಇದು Manor, James ಅವರು 'Political change in an Indian State Mysore ೧೯೧೭-೧೯೫೫' ಎಂಬ ಕೃತಿಯಲ್ಲಿನ ಅಭಿಪ್ರಾಯ. (೧೯೩೭ ರಲ್ಲಿ 'ಮೈಸೂರಿನ ಪ್ರಜಾಸಂಯುಕ್ತ ಪಕ್ಷ'ವು ಕಾಂಗ್ರೇಸಿನಲ್ಲಿ ವಿಲೀನ ಆಗುವವರೆವಿಗೂ ಈ ಥರದ ಬೆಳವಣಿಗೆ ಮುಂದುವರೆದಿತ್ತು.)

೨೯. ಅಂದರೆ ಸಮ್ಮೇಳನದ ಸ್ಥಳಕ್ಕೆ 'ವಿಜಯನಗರ' ಎಂತಲೂ, ನೀರೊದಗಿಸಲು ಮಾಡಿದ್ದ ಸಣ್ಣ ಕೆರೆಗೆ 'ಪಂಪಾ ಸರೋವರ' ಎಂತಲೂ, ಪ್ರವೇಶ ದ್ವಾರಕ್ಕೆ ಹಂಪೆಯ ವಿರೂಪಾಕ್ಷನ ದೇವಾಲಯದ ಗೋಪುರದ ರೀತಿಯ ಅಲಂಕಾರ ಮೊದಲಾದವು ಕರ್ನಾಟಕದ (ಕನ್ನಡಿಗರ) ಸಾಂಸ್ಕೃತಿಕ ಸಂಕೇತಗಳಾಗಿ ರೂಪು ತಳೆದಿದ್ದವು.

೩೦. ದೇಶಪಾಂಡೆ ಕೆ.ಎಸ್., **ಕನ್ನಡ ಗುಡಿ ಕರ್ನಾಟಕ ವಿದ್ಯಾವರ್ಧಕ ಸಂಘ**, (ಧಾ. ೧೯೯೪), ಪು. ೫೬

೩೧. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ಸಂಪುಟಗಳಲ್ಲಿನ ನಿರ್ಣಯಗಳನ್ನು ದಾಖಲೆ ಯನ್ನಾಗಿಟ್ಟುಕೊಂಡು ಈ ಮಾತನ್ನು ಹೇಳಲಾಗಿದೆ.

೩೨. ದೇಶಪಾಂಡೆ, ಕೆ.ಎಸ್., ಮೇಲಿನದೆ, ಪು. ೫೯ ಹಾಗೂ ಬೇಂದ್ರೆ ದ.ರಾ., **ಸಾಹಿತ್ಯದ ವಿರಾಟ್ ಸ್ವರೂಪ** (ಧಾ. ೧೯೭೪), ಪು. ೯೭೨-೩

೩೩. ನೆಹರು ರಿಪೋರ್ಟ್., (೧೯೨೮), ಕರ್ನಾಟಕ ರಾಜ್ಯ ಪತ್ರಾಗಾರ (ಬೆಂಗಳೂರು)

೩೪. ಸೈಮನ್ ಕಮಿಷನ್ನಿನ ಶಿಫಾರಸ್ಸುಗಳು ಮುಂದೆ ಅಂದರೆ ೧೯೩೭ ರಲ್ಲಿ ಸಿಂಧ್, ಒರಿಸ್ಸಾ ಪ್ರಾಂತ್ಯಗಳ ರಚನೆಗೆ ಆಧಾರವಾಗಿದ್ದವು.

೩೫. ಮುಗಳಿ ರಂ.ಶ್ರೀ., (೧೯೭೦), ಮೇಲಿನದೆ, ಸಂಪುಟ-೧, ಪು. ೩೧೭

೩೬. ಬಿಂದುಮಾಧವ, ಬುರ್ಲಿ., (ಸಂ.) (೧೯೩೭), **ಕರ್ನಾಟಕ ದರ್ಶನ**, ಪು. ೫೬-೫೭

೩೭. ವೀರತಪ್ಪ ಕೆ., **ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ**, (ಬೆಂ.) ಪು. ೨೧

೩೮. ಚಂದ್ರಶೇಖರ್ ಎಸ್., (೧೯೮೩), ಮೇಲಿನದೆ, ಪು. ೯೨

೩೯. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, (೧೯೪೦) ಸಂಪುಟ-೨೫, ಸಂಚಿಕೆ-೪, ಪು. ೨೨೭

೪೦. ಹಾಲಪ್ಪ, ಜಿ.ಎಸ್., **ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ**, (ಬೆಂ. ೧೯೬೪), ಪು. ೩೨೯-೩೩೩

೪೧. ಶ್ರೀನಿವಾಸ, ಮಂಗಳವೇಡೆ ಮತ್ತು ನಾರಾಯಣ, ಸಂಗಮ., ಮೇಲಿನದೆ, ಪು. ೪೬

೪೨. ಶ್ರೀನಿವಾಸ, ಮಂಗಳವೇಡೆ ಮತ್ತು ನಾರಾಯಣ ಸಂಗಮ., ಮೇಲಿನದೆ, ಪು. ೪೭-೪೮

೪೩. ನಿಜಲಿಂಗಪ್ಪ ಎಸ್., 'ಕರ್ನಾಟಕ ಏಕೀಕರಣ', (ರಂ.ರಾ. ದಿವಾಕರ (ಸಂ.) **ಕರ್ನಾಟಕ ಪರಂಪರೆ**), ಪು. ೫೬೦

೪೪. ಚಂದ್ರಶೇಖರ್ ಎಸ್., ಮೇಲಿನದೆ, ಪು. ೯೨

೪೫. ಶ್ರೀನಿವಾಸ, ಮಂಗಳವೇಡೆ ಮತ್ತು ನಾರಾಯಣ ಸಂಗಮ., (೧೯೪೬), ಮೇಲಿನದೆ, ಪು. ೫೫. ಸಂಡೂರಿನ ಪ್ರಭುಗಳು ದಿನಾಂಕ ೧.೭.೧೯೪೬ ರಂದು ಈ ಮಾತನ್ನು ಹೇಳುವುದರ ಮೂಲಕ ಅಧಿಕೃತವಾಗಿ ಘೋಷಣೆ ಇತ್ತರು.

೪೬. ಡೆಕ್ಕನ್ ಹೆರಾಲ್ಡ್, (೧೬.೧೧.೧೯೫೫), ಬೆಂಗಳೂರು

೪೭. ಕಾಮತ್ ಯು. ಸೂರ್ಯನಾಥ್., (ಸಂ.) **ಕರ್ನಾಟಕ ಗ್ಯಾಸೆಟಿಯರ್, ಭಾಗ-೧**, (ಬೆಂ, ೧೯೮೪), ಪು. ೨೯೭. ಮುಂದೆ ಈ ಸಮಿತಿ 'ಏಕೀಕರಣ ಸಮಿತಿ'ಯಾಗಿಯೂ, ಅನಂತರ 'ಏಕೀಕರಣ ಸಂಘ'ವಾಗಿಯೂ ರೂಪುತಳೆದಿದೆ.

೪೮. ವೀರತಪ್ಪ ಕೆ., ಮೇಲಿನದೆ, (ಬೆ. ೧೯೮೬), ಪು. ೧೧೭

೪೯. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ-೩೨, ಸಂಚಿಕೆ ೧-೨, (ಬೆಂ. ೧೯೪೭), ಪು. ೧೨೨-೩

೫೦. **ಧರ್ ಸಮಿತಿಯ ವರದಿ**, (೧೯೪೮), ಪು. ೭೬, (ಕನ್ನಡ ಅವತರಣಿಕೆ) ಕರ್ನಾಟಕ ರಾಜ್ಯ ಪತ್ರಾಗಾರ (ಬೆಂ.)

೫೧. ಶಾಂತರಸ, ರಾಯಚೂರು, (ಕರ್ನಾಟಕ ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷರು) ಇವರೊಂದಿಗಿನ ಚರ್ಚೆಯಲ್ಲಿ (ದಿನಾಂಕ ೪.೯.೯೫) ಅಭಿವ್ಯಕ್ತಗೊಂಡ ವಿಚಾರಗಳನ್ನು ಇಲ್ಲಿ ದಾಖಲಿಸಲಾಗಿದೆ.

೫೨. **ಧರ್ ಸಮಿತಿ ವರದಿ**, (೧೯೪೮)ಯ ಪ್ರಸ್ತಾವನೆಯಲ್ಲಿ ಹೇಳಿಕೊಂಡಿರುವ ಹಿನ್ನೆಲೆಯಲ್ಲಿ ಪು. ೨

೫೩. **ಧರ್ ಸಮಿತಿ ವರದಿ**, ೧೯೪೮, ಪು. ೨೦-೨೧

೫೪. ಚವಲಾರ, ಸರೋಜಿನಿ, **ಸನೂತನ**, (ಹು, ೧೯೯೪), ಪು. ೭೨

೫೫. **ಧರ್ ಸಮಿತಿ ವರದಿ**, (೧೯೪೮) ಕಂಡಿಕೆ-೧೫೨, ಉಪವಿಭಾಗ-೧, ಪು. ೭೨

೫೬. 'ಜೆ.ವಿ.ಪಿ.' ಅಂದರೆ ಜವಾಹರ್‌ಲಾಲ್ ನೆಹರು, ವಲ್ಲಭಬಾಯಿ ಪಟೇಲ್ ಮತ್ತು ಪಟ್ಟಾಭಿ ಸೀತಾರಾಮಯ್ಯ ಅವರುಗಳ ಹೆಸರಿನ ಮೊದಲ ಅಕ್ಷರಗಳು. ಈ ಮೂವರು ಸಮಿತಿಯ ಸದಸ್ಯರಾಗಿದ್ದರು.

೫೭. ವೆಂಕಪ್ಪಗೌಡ, ಕೋಣಂದೂರು., (ಸಂ.) **ಜೀವಂತ ಜ್ವಾಲೆ**, (ಬೆಂ. ೧೯೮೧), ಪು. ೧೬೩-೧೬೪. ಬಸವರಾಜ ಕಟ್ಟೀಮನಿ ಅವರು 'ಅಪ್ಪಟ ಚಿನ್ನ' ಎಂಬ ಲೇಖನದಲ್ಲಿ ವ್ಯಕ್ತಪಡಿಸಿರುವ ವಿಚಾರಗಳ ಹಿನ್ನಲೆಯಲ್ಲಿ.

೫೮. ಡೆಕ್ಕನ್ ಹೆರಾಲ್ಡ್ ದಿನಪತ್ರಿಕೆ, (೧೬.೧೧.೧೯೫೩), (ಬೆಂ. ೧೯೫೫)

೫೯. ನಿಜಲಿಂಗಪ್ಪ ಎಸ್., ಮೇಲಿನದೆ, ಪು. ೫೬೫

೬೦. ಅಂಬೇಡ್ಕರ್ ಬಿ.ಆರ್., **ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ-೧**, (ಬೆಂ. ೧೯೯೦), ಪು. ೧೪೭ (ಕನ್ನಡವಾದದ ಸಂಪುಟಗಳು, ಕಂ.ಸಂ.ನಿ)

೬೧. ಭಾರತೀಯ ಕಮ್ಯುನಿಸ್ಟ್ ಪಕ್ಷ., **ಕರ್ನಾಟಕ ಏಕೀಕರಣ**, ಪು. ೫-೬

೬೨. ಕ.ಸಾ.ಪ.ಪ., ಸಂಪುಟ-೩೫, ಸಂಚಿಕೆ-೧ (ಬೆಂ, ೧೯೫೦), ಪು. ೨

೬೩. ಸುಬ್ಬಾರಾವ್, ಜೆ.ವಿ., (ಸಂ.) **ಹಿಸ್ಟರಿ ಆಫ್ ಆಂಧ್ರ ಮೂವ್‌ಮೆಂಟ್**, ಸಂ- ೨ (ಹೈದರಾಬಾದ್, ೧೯೮೨) ಪು. ೫೦೬

೬೪. ದೇಸಾಯಿ, ವಿ.ಎಚ್., (೬.೧.೯೪), '**ಭಾಷಾವಾರು** ರಾಜ್ಯ ನಿರ್ಮಾಪಕರು: ಒಂದು ಸ್ಮರಣೆ', 'ಸಂಯುಕ್ತ ಕರ್ನಾಟಕ' ದಿನಪತ್ರಿಕೆ

೬೫. ಅಂಬೇಡ್ಕರ್ ಬಿ.ಆರ್., (೨೩.೪.೧೯೫೩) 'ಟೈಮ್ಸ್ ಆಫ್ ಇಂಡಿಯಾ' ದಿನ ಪತ್ರಿಕೆಗೆ ಬರೆದ ಭಾಷಾವಾರು ಪ್ರಾಂತಗಳನ್ನು ಕುರಿತ ತಮ್ಮ ಲೇಖನದಲ್ಲಿ ಈ ಮಾತುಗಳನ್ನಾಡಿದ್ದಾರೆ. (ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು) ಸಂಪುಟ-೧, ಪು. ೧೮೭

೬೬. ದಿವಾಕರ, ರಂ.ರಾ., ಮೇಲಿನದೆ, ಪು. ೧೧೭

೬೭. ಲಿಂಗಪ್ಪ, ಕೋಣಂದೂರು., (ಸಂ.) **ಶಾಸನಸಭೆಯಲ್ಲಿ ಶಾಂತವೇರಿ** (ಬೆಂ. ೧೯೮೭), ಪು. ೮೩. ಜಸ್ಟೀಸ್ **ವಾಂಚೂ** ಅವರು ವರದಿ ಒಪ್ಪಿಸುವುದಕ್ಕೆ ಮೊದಲು ಮಾಹಿತಿ ಸಂಗ್ರಹಿಸುತ್ತಿದ್ದ ಸಂದರ್ಭದಲ್ಲೂ ಮೈಸೂರಿನ ಸರ್ಕಾರ ಸುಮ್ಮನಿತ್ತು. ಇದನ್ನು ಸಹ ಹಿನ್ನೆಲೆಯಾಗಿ ಇಟ್ಟುಕೊಂಡು ಗೋಪಾಲಗೌಡರು ಟೀಕಿಸಿದ್ದರು.

೬೮. ಲಿಂಗಯ್ಯ ಡಿ., (ಸಂ.) **ರಾಜಕೀಯ ಪಟು**, (ಬೆಂ. ೧೯೭೫), ಪು. ೫೩. ಇದರಲ್ಲಿ 'ಕೆಂಗಲ್ಲರೂ ಕರ್ನಾಟಕ ಏಕೀಕರಣವೂ ಕೆಂಗಲ್ ಸನ್ಮಾನ ಗ್ರಂಥ' ಎಂಬ ಸೂರ್ಯನಾಥ ಕಾಮತ್ ಅವರ ಲೇಖನವನ್ನು ಆಧಾರವನ್ನಾಗಿಸಿಕೊಳ್ಳಲಾಗಿದೆ.

೬೯. ನಿಜಲಿಂಗಪ್ಪ, ಎಸ್., ಮೇಲಿನದೆ, ಪು. ೫೭೩

೨೦. ಚವಲಾರ, ಸರೋಜಿನಿ., **ಜಯದೇವಿ ತಾಯಿ ಲಿಗಾಡೆ**, (ಬೆಂ. ೧೯೯೧) ಪು. ೧೬೯ ೧೭೨. ಮೈಸೂರಿನ ಸಮಸ್ಯೆಯನ್ನು ಸೂಕ್ಷ್ಮವಾಗಿ ಪರಿಗಣಿಸಿ ಮೈಸೂರಿನ ಮಹಾರಾಜರನ್ನು ಘಟನಾತ್ಮಕ ಅರಸರನ್ನಾಗಿ ಸ್ವೀಕರಿಸಬೇಕು ಎಂಬ ನಿಲುವಿನಿಂದ ನಿಜಲಿಂಗಪ್ಪ ಅವರು ಇದ್ದದ್ದು. ಅದೇ ರೀತಿ ಬೇಲೂರಿನ ಸಾಹಿತ್ಯ ಸಮ್ಮೇಳನದಲ್ಲಿ (೧೯೫೨) ಏಕೀಕರಣದ ಬಗ್ಗೆ ಕೆಂಗಲ್ಲರು ಚಕಾರವೆತ್ತದೆ ಇದ್ದದ್ದು.

೨೧. ಪಾಟೀಲ, ಶಂಕರಗೌಡ ಚಲ್ಲನಗೌಡ, ಅದರಗುಂ., **ನನ್ನ ದಿನಚರಿ**, (ಬೆಂ, ೧೯೯೪). ಪು. ೨

೨೨. ನವಯುಗ., (ದಿನಾಂಕ ೧೯.೪.೧೯೫೩) ದೈನಿಕ

೨೩. ಅಂದಿನ ಈ ಘಟನೆಯ ಪ್ರತ್ಯಕ್ಷದರ್ಶಿ ಹಾಗೂ ಏಕೀಕರಣವಾದಿ ಎಸ್.ಎ. ವಂಟಗುಡಿ (ರಬಕವಿಯಲ್ಲಿ ವಾಸವಾಗಿದ್ದಾರೆ) ಅವರು ಉದ್ದೇಶಪೂರ್ವಕ ವಾಗಿಯೇ ಜನ ಈ ರೀತಿ ಮಾಡಿದರು ಎಂದು ಸಂದರ್ಶನದಲ್ಲಿ ತಿಳಿಸಿದ್ದಾರೆ.

೨೪. ಲಿಂಗಪ್ಪ, ಕೋಣಂದೂರು., (ಸಂ.೧), ಮೇಲಿನದೆ, ಪು. ೮೨-೮೮

೨೫. ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿ, (ಮಾಗಳ) ಹಾಗೂ ಬೆಲ್ಲದ ಚನ್ನಪ್ಪ (ಹೊಸಪೇಟೆ) ಅವರುಗಳು ತಮ್ಮ ಹಿಂದಿನ ನೆನಪುಗಳನ್ನು ಸಂದರ್ಶನದಲ್ಲಿ ದಾಖಲಿಸಿದ್ದಾರೆ. (ಧ್ವನಿ ಸುರುಳಿಗಳಿವೆ).

೨೬. **ಗೃಹ ಖಾತೆ ನೋಟೀಫಿಕೇಶನ್** ಅನ್ವಯ., (ನಂ. ೫೩:೬೯:೫೩: ಪಬ್ಲಿಕ್, ೨೯.೧೨.೧೯೫೩) ಇದರಲ್ಲಿ ಆಯಾ ಪ್ರಾಂತ್ಯಗಳ ಭಾಷೆ ಮತ್ತು ಸಂಸ್ಕೃತಿಗಳನ್ನು ಮೂಲ ಆಧಾರವನ್ನಾಗಿಟ್ಟುಕೊಂಡು, ಆರ್ಥಿಕ ಹಾಗೂ ಆಡಳಿತಾತ್ಮಕ ಅಂಶಗಳನ್ನು ಪರಿಗಣಿಸಿ ರಾಷ್ಟ್ರೀಯ ದೃಷ್ಟಿಕೋನದಲ್ಲಿ ಪರಿಶೀಲಿಸಲು ಹೇಳಲಾಗಿದೆ. (ನವದೆಹಲಿ)

೨೭. ಮುಗಳಿ ರಂ.ಶ್ರೀ., **ಅಧ್ಯಕ್ಷೀಯ ಭಾಷಣಗಳು**, ಸಂ.೩. ಪು. ೬೦-೬೧, ಏಕೀಕರಣದ ಬಗೆಗಿನ ವಿಚಾರಗಳನ್ನು ಶಿವರಾಮ ಕಾರಂತರು ಅಭಿವ್ಯಕ್ತಿಸಿರು ವುದನ್ನು ಅನುಬಂಧದಲ್ಲಿ ನೀಡಲಾಗಿದೆ.

೨೮. **ಮೈಸೂರು ಲೆಜಿಸ್ಲೆಟಿವ್ ಕೌನ್ಸಿಲ್ ಡಿಬೇಟ್ಸ್**, ೧೦.೧೦.೧೯೫೫, ಪು. ೨೨೪ (ಕ.ರಾ.ಪ., ಬೆಂ.)

೨೯. ದಿವಾಕರ ರಂ.ರಾ., **ಕರ್ನಾಟಕ ಏಕೀಕರಣ ಕಥೆ**, ಪು. ೧೩೦

೩೦. ಚವಲಾರ, ಸರೋಜಿನಿ., **ಸನೂತನ**, ಪು. ೨೧. ಇದರಲ್ಲಿನ 'ಕರ್ನಾಟಕ ಏಕೀಕರಣದ ಕೆಲವು ವಿಚಾರಗಳು' ಎಂಬ ಲೇಖನ

೯೩. ನಿಜಲಿಂಗಪ್ಪ ಎಸ್., ಮೇಲಿನದೆ, ಪು. ೫೭೨

೯೪. ನಾಗಭೂಷಣ ತಿವಾರಿ (ಪ್ರ.ಸಂ.), **ಕರ್ನಾಟಕ ವೈಭವ**, (ಮೈ. ೧೯೭೩) ಪು. ೩೯. (ಎ. ರಾಮಣ್ಣ ಅವರು 'ವಿಜಯ' ದಿನಪತ್ರಿಕೆಯ ಸಂಪಾದಕರಾಗಿದ್ದರು).

೯೫. ನಾಯಕ ಹಾ.ಮಾ., (ಪ್ರ.ಸಂ.), 'ಕರ್ನಾಟಕ ಏಕೀಕರಣ', **ಕರ್ನಾಟಕ ವಿಷಯ ವಿಶ್ವಕೋಶ** (ಮೈಸೂರು, ೧೯೭೯) ಪು. ೨೮೧

೯೬. ವೆಂಕಪ್ಪಗೌಡ, ಕೋಣಂದೂರು., (ಸಂ.), **ಜೀವಂತಜ್ವಾಲೆ**, ಪು. ೧೭೦. ಈ ಸಂದರ್ಭದಲ್ಲಿ ರಾವ್ ಬಹದ್ದೂರ್ ಅವರು 'ಸಂಯುಕ್ತ ಕರ್ನಾಟಕ' ಪತ್ರಿಕೆಯ ಸಂಪಾದಕರಾಗಿದ್ದರು.

೯೭. **ಫಜಲ್ ಅಲಿ ವರದಿ** ಹಾಗೂ ನಾಮಕರಣ ಮಸೂದೆ ಮೇಲೆ ಆದಂಥ ಚರ್ಚೆಗಳ (೧೯೫೬ ರ ಏಪ್ರಿಲ್)ಲ್ಲಿ ದಾಖಲಾಗಿರುವ ವಿಚಾರಗಳನ್ನು ಬಳಸಿಕೊಳ್ಳಲಾಗಿದೆ. ಲಿಂಗಣ್ಣ ಎಂಬ ಶಾಸಕರು ವ್ಯಕ್ತಪಡಿಸಿದ ಅನುಮಾನಗಳಿಗೆ ಕೆಂಗಲ್ಲರು ಈ ರೀತಿಯಲ್ಲಿ ಉತ್ತರ ಕೊಟ್ಟಿದ್ದರು.

೯೮. ಆಲೂರ ವೆಂಕಟರಾವ್., (೧೯೫೭), **ಕರ್ನಾಟಕತ್ವದ ವಿಕಾಸ**, ಪು. ೯, ೨೩, ೩೪

೯೯. ಕುಲಕರ್ಣಿ, ಕೃಷ್ಣ ಕೊಲ್ಲಾರ, ಕೃಷ್ಣಕುಮಾರ ಕಲ್ಲೂರ, (ಬೆಂ, ೧೯೫೫) ಪು. ೨೭

೧೦೦. ಮಹಾರಾಷ್ಟ್ರೀಗರು ಕನ್ನಡಿಗರೊಂದಿಗೆ ಗಡಿವಿವಾದವನ್ನು ಮತ್ತೆ ಮತ್ತೆ ಕೆದಕುತ್ತಿದ್ದುದರಿಂದ ಕೇಂದ್ರ ಸರ್ಕಾರ ೧೯೬೬ ರಲ್ಲಿ **ಮಹಾಜನ್ ಆಯೋಗವನ್ನು** ನೇಮಿಸಿತು. ಇದು ನೀಡುವ ವರದಿಯೇ ಅಂತಿಮ ಎಂದು ಎರಡೂ ರಾಜ್ಯಗಳು ಒಪ್ಪಿಕೊಂಡಿದ್ದವು. ಅದರಲ್ಲಿ ಜತ್ತಿ, ಅಕ್ಕಲಕೋಟೆ, ಕಾಸರಗೋಡುಗಳು ಕರ್ನಾಟಕಕ್ಕೂ ನಿಪ್ಪಾಣಿ, ಖಾನಾಪುರ, ಹಳಿಯಾಳಗಳು ಮಹಾರಾಷ್ಟ್ರಕ್ಕೂ ಸೇರಬೇಕೆಂದು ಹೇಳಿತು. ಅಲ್ಲದೆ ಬೆಳಗಾಂ ಕನ್ನಡ ಪ್ರದೇಶವಾಗಿದ್ದು ಕರ್ನಾಟಕ ದಲ್ಲಿಯೇ ಉಳಿಯುತ್ತದೆ ಎನ್ನಲಾಗಿದೆ. ಇದನ್ನು ಕನ್ನಡಿಗರು ಒಪ್ಪಿದ್ದರೂ ಮರಾಠಿಗರು ಒಪ್ಪುತ್ತಿಲ್ಲ. ಹೀಗಾಗಿ ಈ ತೀರ್ಮಾನ ನನೆಗುದಿಗೆ ಬಿದ್ದಿದೆ.

೮೧. ಲಿಂಗಪ್ಪ, ಕೋಣಂದೂರು., (ಸಂ.) (೧೯೮೭), ಮೇಲಿನದೆ, ಪು. ೯೫

೮೨. ನಿಜಲಿಂಗಪ್ಪ ಎಸ್., (೧೯೯೨), (**ಕರ್ನಾಟಕ ಪರಂಪರೆ**, ಸಂ. ದಿವಾಕರ ರಂ.ರಾ.), 'ಕರ್ನಾಟಕ ಏಕೀಕರಣ' ಲೇಖನದಲ್ಲಿ ಆಯೋಗವು ಸಂಚಾರ ಮಾಡಿದುದರ ಬಗೆಗಿನ ಅಂಕಿ-ಅಂಶಗಳನ್ನು ಗಮನಿಸಬಹುದು. ಪು. ೩೬೯

೮೩. **ರಿಪೋರ್ಟ್ ಆಫ್ ದಿ ಸ್ಟೇಟ್ಸ್ ರೀ-ಆರ್ಗನೈಸೇಷನ್ ಕಮೀಷನ್**, (೧೯೫೫ ಸೆಪ್ಟೆಂಬರ್ ೩೦, ನ್ಯೂಡೆಲ್ಲಿ, ಕೆ.ಎಂ. ಫಣಿಕ್ಕರ್) (ಕರ್ನಾಟಕಕ್ಕೆ ಸಂಬಂಧಿಸಿದ ೪ನೇ ಅಧ್ಯಾಯ ಪು. ೯೦-೧೦೦, ೩೧೯ ನೆಯ ಕಂಡಿಕೆಯಿಂದ ೩೫೮ ರವರೆಗೆ)

೮೪. ಜಾನುಭಾವ್ **ಟೋಕಾರೆ, ಅಣ್ಣುಗುರೂಜೀಸ್ ಲಾಜಿಕ್**, ಭಾಗ-೧, ಉಸ್ಮಾನಾಬಾದ್, ಶ್ರೀ ಜನಾರ್ಧನ್ ಏಕನಾಥ್ ಜೇಕಾರೆ (ಕರ್ನಾಟಕ ರಾಜ್ಯ ಪತ್ರಾಗಾರದಲ್ಲಿ ದೊರೆತ ದಾಖಲೆಗಳು)

೮೫. ಚಂದ್ರಶೇಖರ ಎಸ್., (೧೯೮೩), 'ಮೈಸೂರು ಮತ್ತು ಏಕೀಕೃತ ಕರ್ನಾಟಕದ ರಚನೆ ೧೯೩೭-೧೯೫೬', (**ಸಾಧನೆ:** ಸಂಪುಟ ೧೨, ಸಂಚಿಕೆ ೪), ಪು. ೯೭. (ಇದರಲ್ಲಿ ಲೇಖಕರು ಮೈಸೂರಿನ ಶಾಸಕಾಂಗ ಪಕ್ಷದ ಸಭೆಯಲ್ಲಿ ನಡೆದ ಚರ್ಚೆಗಳನ್ನು ಆಧಾರವನ್ನಾಗಿಟ್ಟುಕೊಂಡಿದ್ದಾರೆ). ಅಲ್ಲದೆ ನೋ:ಎಂ.ಎಲ್.ಎ.ಡಿ., **ಭಾಗ-ಎರಡು** (೧೯೫೫), ಪು. ೩೩೩

೮೬. ಡೆಕ್ಕನ್ ಹೆರಾಲ್ಡ್, (೧೧ ಮತ್ತು ೧೬ನೆ ನವೆಂಬರ್ ೧೯೫೫) ಸಂಪಾದಕೀಯ ದಲ್ಲಿ.

೮೭. **ಮೈಸೂರು ಲೆಜಿಸ್ಲೇಟೀವ್ ಕೌನ್ಸಿಲ್ ಡಿಬೇಟ್ಸ್** (ಎಂ.ಎಲ್.ಸಿ.ಡಿ.) ೧೯೫೫, ಪು. ೫೭೭-೫೮೧ ಮತ್ತು ಎಂ.ಎಲ್.ಎ.ಡಿ. ನವೆಂಬರ್ ೧೯೫೫, ಪು. ೭೪೦, ಹಾಗೂ ಡೆಕ್ಕನ್ ಹೆರಾಲ್ಡ್ ೫.೧೧.೧೯೫೫

೮೮. ಎಂ.ಎಲ್.ಸಿ.ಡಿ.: ೧೯೫೫ ನವೆಂಬರ್: ಪು. ೧೬೧ ಹಾಗೂ ಎಂ.ಎಲ್.ಎ.ಡಿ. ನವೆಂಬರ್ ೧೯೫೫ ನೇ ಪು. ೭೪೦. ಡೆಕ್ಕನ್ ಹೆರಾಲ್ಡ್ ೧೮.೧೧.೧೯೫೫

೮೯. ಡೆಕ್ಕನ್ ಹೆರಾಲ್ಡ್, ೧೮.೧೧.೧೯೫೫

೯೦. ಮಿರ್ಜಾ ಇಸ್ಮಾಯಿಲ್ಲರು ಡಿ.ವಿ. ಗುಂಡಪ್ಪ ಅವರಿಗೆ ಬರೆದಿರುವ ಕಾಗದ (೨೧.೮.೧೯೫೫), ಡಿ.ವಿ.ಜಿ. ಸಂಗ್ರಹ, ಕರ್ನಾಟಕ ರಾಜ್ಯ ಪತ್ರಾಗಾರ.

೯೧. ಡಿ.ವಿ. ಗುಂಡಪ್ಪ ಅವರು ಆರ್.ಆರ್. ದಿವಾಕರರಿಗೆ ಬರೆದಿರುವ ೨೩.೧೧.೧೯೫೫ ರ ಪತ್ರದಲ್ಲಿ (ದಿವಾಕರರ ಕಾಗದ-ಪತ್ರಗಳ ಸಂಗ್ರಹ, **ಕರ್ನಾಟಕ ರಾಜ್ಯ ಪತ್ರಾಗಾರ**, ಬೆಂಗಳೂರು).

೯೨. ಧಾರವಾಡದಲ್ಲಿ ನರಸಿಂಹ ದಾಬಡೆ, ಶಂಕರ ಕುರ್ತಕೋಟಿ ಮೊದಲಾದವರನ್ನು ಸಂದರ್ಶನ ಮಾಡಿದಾಗ ವ್ಯಕ್ತಗೊಂಡ ಅಭಿಪ್ರಾಯಗಳು.

# 'ಕರ್ನಾಟಕ' ನಾಮಕರಣ ಚರಿತ್ರೆ

ನಾಡು ಏಕೀಕರಣಗೊಂಡುದುದರ ಬಗೆಗೆ ದೀರ್ಘವಾದ ಚರಿತ್ರೆ ಇರುವಂತೆಯೆ ಹೆಸರಿನ ನಾಮಕರಣಕ್ಕೂ ತನ್ನದೇ ಆದ ಚರಿತ್ರೆ ಇದೆ. ಕನ್ನಡಿಗರಿಗೆ ಸಾಂಸ್ಕೃತಿಕವಾಗಿ ದತ್ತವಾಗಿದ್ದ 'ಕರ್ನಾಟಕ' ಎಂಬ ಹೆಸರು ಏಕೀಕೃತ ಭೂಪ್ರದೇಶಕ್ಕೆ ಲಭಿಸದೆ ಹೋದದ್ದು ಅವಮಾನದ ಸಂಗತಿಯಾಗಿ ರೂಪು ತಳೆಯುತ್ತಾ ಹೋಯಿತು. ಅದರಲ್ಲೂ ಮೈಸೂರೇತರ ಕನ್ನಡಿಗರಿಗೆ ಮೈಸೂರಿಗರ ಮುಂದಾಳತ್ವದ ಹುಂಬತನಗಳ ಬಗ್ಗೆ ಮತ್ತೆ ಮತ್ತೆ ಅಸಮಧಾನವಾಗತೊಡಗಿತು. ನಾಡಿನ ಮಧ್ಯೆಯಿರುವ ಹಂಪಿಯು ಈ ಭಾಗದವರಿಗೆ 'ಮರ್ಮಸ್ಥಾನ'ವಾಗಿ ಕಂಡಿತು. 'ಕನ್ನಡಿಗರ ಸಾಂಸ್ಕೃತಿಕ ರಾಜಧಾನಿ' ಹಂಪಿಯಲ್ಲದೆ ಬೇರೆ ಯಾವುದೆ ತಾಣವಿಲ್ಲ ಎಂಬುದು ಇವರ ವಾದ. ಹೀಗಾಗಿ ಈ ಭಾಗದ ಜನರೆಲ್ಲರೂ ೧೯೫೬ ರ ನವೆಂಬರ್ ೧ ನೆಯ ದಿನವನ್ನು ರಾಜ್ಯ ನಿರ್ಮಾಣದ ದಿನವನ್ನಾಗಿ ಹಂಪಿಯಲ್ಲಿಯೆ ಆಚರಿಸಿದರು. 'ಕನ್ನಡ-ಕರ್ನಾಟಕತ್ವ'ದ ಕೆಲಸಗಳಿಗೆ ಮೊದಲಿಗರೆಂದೆ ಖ್ಯಾತಿಗಳಿಸಿದ್ದ ಆಲೂರ ವೆಂಕಟರಾಯರು ಈ 'ನವರಾಜ್ಯೋದಯದ ಉತ್ಸವ'ಕ್ಕೂ ಪೌರೋಹಿತ್ಯ ವಹಿಸಿದ್ದುದು ವಿಶೇಷವಾಗಿತ್ತು. ಅವರ ನೇತೃತ್ವದಲ್ಲಿ ನಡೆದ ಸಾಂಪ್ರದಾಯಿಕ ಪೂಜೆ-ಆಚರಣೆಗಳು ಆ ದಿನವನ್ನು ಆಧ್ಯಾತ್ಮಿಕವನ್ನಾಗಿಸಿದ್ದವು. ವಿದ್ಯಾರಣ್ಯರ ಪ್ರೇರಣೆಯನ್ನು ಮೆಲುಕು ಹಾಕಿ ಭುವನೇಶ್ವರಿ, ಪಂಪಾಪತಿಯ ಪೂಜೆ, ನವ ಕರ್ನಾಟಕದ ಬಾವುಟ, ಕರ್ನಾಟಕ ಗೀತೆಗಳು, 'ಕರ್ನಾಟಕತ್ವ ಸೂತ್ರಗಳ' ಪಠಣ, ಕರ್ನಾಟಕ ಜ್ಯೋತಿ, ಕರ್ನಾಟಕ ಪೂರ್ಣ ತೀರ್ಥ ಕುಂಭಗಳು ಹೀಗೆ ಹತ್ತು-ಹಲವು ಕಾರ್ಯಕ್ರಮಗಳು 'ಕರ್ನಾಟಕಮಯ'ವಾಗಿ ರೂಪು ತಳೆದಿದ್ದವು.[೧]

ಆದರೆ ಇದಾವುದರ ಬಗೆಗೆ ತಲೆಕೆಡಿಸಿಕೊಳ್ಳದೆ ಬೆಂಗಳೂರಿನಲ್ಲಿ ವಿಶಾಲ ಮೈಸೂರು ರಾಜ್ಯದ ಉತ್ಸವವನ್ನು ಆಚರಿಸಲಾಗುತ್ತಿತ್ತು. ಹಂಪಿ ಹಾಗೂ ಬೆಂಗಳೂರುಗಳಲ್ಲಿ ಒಂದೇ ಉತ್ಸವವನ್ನು ಭಿನ್ನವಾಗಿ ಆಚರಿಸಿದ ಸನ್ನಿವೇಶ ಕನ್ನಡಿಗರದು. 'ಕರ್ನಾಟಕ' ಎಂಬ ಹೆಸರಿನ ಪ್ರಾಚೀನತೆಯ ಬಗೆಗೆ ಸ್ಪಷ್ಟ ಅರಿವಿದ್ದರೂ ನಾಡಿಗೆ 'ಮೈಸೂರು ರಾಜ್ಯ' ಎಂದು ಕರೆದದ್ದು ಸಂಕುಚಿತತೆಯ ಧೋರಣೆಯನ್ನು ಅನಾವರಣಗೊಳಿಸಿತ್ತು. ಈ ಹೆಸರಿನ ನಾಡನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲದ ಸ್ಥಿತಿ ಮೈಸೂರೇತರ ಕನ್ನಡಿಗರದು. ಮೈಸೂರು

ಸಂಸ್ಥಾನಿಕರಲ್ಲೂ ಸಾಹಿತಿ-ಕಲಾವಿದರು, ರಾಜಕಾರಣಿಗಳು ಮೊದಲಾದವರ 'ಕರ್ನಾಟಕ' ಹೆಸರಿನ ಬಯಕೆ ಈಡೇರದೆ ಇದ್ದದ್ದು ಅಸಮಧಾನಕ್ಕೆ ಎಡೆಮಾಡಿಕೊಟ್ಟಿತು. ಈ ಅಸಮಾಧಾನದ ಚರಿತ್ರೆಯನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನಿಸಿದ ವ್ಯಕ್ತಿಗಳು ಹಲವರಿದ್ದಾರೆ. ಅಂತೆಯೇ ಅನೇಕ ಸಂಘ-ಸಂಸ್ಥೆಗಳಿವೆ. ನಾಡನ್ನು 'ಕರ್ನಾಟಕ ನಾಮಕರಣ'ದ ಉತ್ಸವಕ್ಕೆ ಸಜ್ಜುಗೊಳಿಸಲು ಹದಿನೇಳು ವರುಷಗಳ ಕಾಲ ಹೆಣಗಾಡಬೇಕಾಯಿತು. ಈ ಆಶಯಕ್ಕೆ ನಿರಂತರವಾಗಿ ತೊಡಗಿಸಿಕೊಂಡು ಪ್ರಯತ್ನಿಸಿದ ವ್ಯಕ್ತಿ ಹಾಗು ಅವರ ಚಟುವಟಿಕೆಗಳನ್ನು ಪರಿಶೀಲಿಸಬೇಕಾದ ಜರೂರು ಮಹತ್ತ್ವದ್ದು.

ನಾಡು ಏಕೀಕರಣಗೊಳ್ಳುವ ಹತ್ತು ದಿನಕ್ಕೆ ಮೊದಲೇ ಎಸ್. ನಿಜಲಿಂಗಪ್ಪ ಅವರು ವಿಶಾಲ ಮೈಸೂರು ಕಾಂಗ್ರೆಸ್ ಶಾಸಕಾಂಗ ಪಕ್ಷದ ಅವಿರೋಧ ನಾಯಕರಾಗಿ ಆಯ್ಕೆ ಆಗಿದ್ದರು.[೨] ಇದಾದ ಹತ್ತು ದಿನಗಳಿಗೆ ಮುಖ್ಯಮಂತ್ರಿ ಗದ್ದುಗೆಯೇರಿದ ಅವರು 'ಕರ್ನಾಟಕ'ದ ಮುಖ್ಯಮಂತ್ರಿಯಾಗದೆ 'ಮೈಸೂರು ರಾಜ್ಯ'ದ ಮುಖ್ಯಮಂತ್ರಿ ಎಂದೇ ಕರೆಸಿಕೊಂಡರು. ಅವರಿಗೆ ಉತ್ತರ ಕರ್ನಾಟಕದ ಪ್ರದೇಶಗಳ ಕನ್ನಡಿಗರ ಮಹದಾಸೆಯ ಅರಿವು ಇತ್ತು. ಆದರೆ ಈ ಬಗೆಗೆ ಚಕಾರವೆತ್ತಲಿಲ್ಲ. ಬದಲಾಗಿ ರಾಜ್ಯಪಾಲರ ಭಾಷಣಕ್ಕೆ ಅಭಿನಂದನೆ ಸಲ್ಲಿಸುವ ಸಂದರ್ಭದಲ್ಲಿ -

> "ಸದನದ ಎಲ್ಲಾ ಸದಸ್ಯರಿಂದ ಮತ್ತು ಹೊಸ ರಾಜ್ಯದ ಭಾಗವಾಗಿ ಐದು ಪ್ರಾಂತಗಳ ಪ್ರತಿನಿಧಿಗಳಿಂದ ಹೊಸ ರಾಜ್ಯ ರಚನೆಯಾಗಿರುವುದು ಬಹಳ ಸಂತಸ ತಂದಿದೆ. ನಿಜವಾಗಿಯೂ, ಸಭೆಯಲ್ಲಿ ಮಾತನಾಡಿದ ಎಲ್ಲ ಸದಸ್ಯರೂ ಸಂಪೂರ್ಣವಾಗಿ ಹೊಸ ರಾಜ್ಯದ ಪರವಾಗಿ ಮಾತನಾಡಿದ್ದಾರೆ. ಪ್ರತಿಯೊಬ್ಬ ಸದಸ್ಯರೂ ತಮ್ಮ ಉತ್ಸಾಹ, ತೃಪ್ತಿ ಮತ್ತು ಸಂತೋಷದ ಸ್ವಾಗತವನ್ನು ವ್ಯಕ್ತಪಡಿಸಿದ್ದಾರೆ. ಈ ಹೊಸರಾಜ್ಯದ ರಚನೆಯನ್ನು ಎಲ್ಲ ರಾಜಕೀಯ ಪಕ್ಷಗಳೂ ಸ್ವಾಗತಿಸಿವೆಯೆಂದು ತಿಳಿದು ಹೊಸ ರಾಜ್ಯದ ಉದಯಕ್ಕಾಗಿ ಶ್ರಮಿಸಿದ ನಮಗೆಲ್ಲರಿಗೂ ಸಂತಸ ತಂದಿದೆ"[೩]

- ಎಂದು ಉತ್ತರ ನೀಡಿದರು. ಹಾಗಾದರೆ ರಾಜಕಾರಣಿಗಳಲ್ಲಿ ನಾಡನ್ನು 'ಕರ್ನಾಟಕ' ಎಂದು ಕರೆಯುವ ಬಯಕೆ, ಪ್ರಯತ್ನಗಳು ಇರಲಿಲ್ಲವೆ ಎಂಬ ಪ್ರಶ್ನೆ ಕಾಡುತ್ತದೆ. ಆದರೆ ವಾಸ್ತವ ಸ್ಥಿತಿ ಭಿನ್ನ ಬಗೆಯದು. ೧೯೫೬ ರಿಂದಲೂ ನಾಡು ಹೊಸ ಹೆಸರು ಪಡೆಯುವವರೆಗೂ

(೧೯೭೩) ಸದನದಲ್ಲಿ ಈ ಬಗೆಗೆ ಚರ್ಚೆಗಳು ಆಗಿವೆ. ಆದರೆ ಈ ಚರ್ಚೆಗೆ ಸರಿಯಾದ ಕಾರ್ಯತಂತ್ರ ರೂಪುಗೊಳ್ಳಲೇ ಇಲ್ಲ.

**ದೊಡ್ಡಮೇಟಿ ಅಂದಾನಪ್ಪ** ಅವರು ವಿಧಾನಸಭಾ ಸದಸ್ಯರೆಲ್ಲರೂ 'ಕರ್ನಾಟಕ' ಎಂಬ ಹೆಸರನ್ನೇ ಕುರಿತು ಚರ್ಚಿಸಲೆಂದೆ ಒಂದು ವಿಸ್ತೃತ ರೂಪದ ಕೃತಿಯೊಂದನ್ನು ಸಿದ್ಧಪಡಿಸಿ ಹಂಚಿದ್ದರು. ಅಲ್ಲದೆ ಈ ಬಗೆಗೆ **೧೯೫೭ ರ ಸೆಪ್ಟೆಂಬರ್** ೩೦ ರಂದು ಪ್ರಸ್ತಾವವೊಂದನ್ನು ಮಂಡಿಸಿ ಸದನದಲ್ಲಿ ಚರ್ಚೆಗೆ ಅವಕಾಶ ಮಾಡಿಕೊಟ್ಟಿದ್ದೂ ಉಂಟು. ಆದರೆ ಆರು ಗಂಟೆಗಳ ಚರ್ಚೆಯ ಅನಂತರ ಈ ಪ್ರಸ್ತಾವ ಹಳೆಯ ದಾಖಲೆಗಳ ಕಡತ ಸೇರಿತು. ೧೯೫೮ **ರ ಡಿಸೆಂಬರ್** ೧೨ ರಂದು ಆಗಿನ ವಿರೋಧ ಪಕ್ಷದ ಉಪನಾಯಕರಾಗಿದ್ದ **ಎಂ. ರಾಮಪ್ಪನವರು** ಸಹ ಈ ಗೊತ್ತುವಳಿಯನ್ನು ಮಂಡಿಸಿದ್ದರು. ನಾಡಿಗೆ 'ಕರ್ನಾಟಕ' ಎಂದು ಹೆಸರಿಡಲು ಮೂವತ್ತು ಸದಸ್ಯರು ತಮ್ಮ ನಿರ್ಣಯವನ್ನು ತಿಳಿಸುವುದರ ಜೊತೆಗೆ ಎರಡು ದಿನಗಳ ಕಾಲ ಚರ್ಚೆಯೂ ಆಯಿತು. ಆದರೂ ಉಪಯೋಗ ಆಗಲಿಲ್ಲ. **೧೯೬೦ ರ** ಏಪ್ರಿಲ್ ೬ ರಂದು ರಾಮಪ್ಪನವರ ಈ ಗೊತ್ತುವಳಿ ಮತ್ತೆ ಸದನದ ಮುಂದೆ ಪ್ರಸ್ತಾಪ ಆಯಿತು. ಈ ಬಾರಿಯೂ ನಾಮಕರಣದ ವಿಚಾರವನ್ನು ಅನಿರ್ದಿಷ್ಟ ಕಾಲದವರೆಗೆ ಮುಂದೂಡಿದ್ದು ದಾಖಲಾಗಿದೆ.

ಇಂಥ ಗೊತ್ತುವಳಿಯ ಮಂಡನೆ, ಚರ್ಚೆ, ಮುಂದೂಡಿಕೆಯ ಪ್ರಸಂಗಗಳು ಸದನದಲ್ಲಿ ಸರ್ವೆ ಸಾಮಾನ್ಯವಾಗತೊಡಗಿದವು. ಇದರಿಂದ ರಾಜಕಾರಣಿಗಳಷ್ಟೇ ಅಲ್ಲದೆ ಜನರಿಗೂ ಹತಾಸೆ ಆಗದಿರಲಿಲ್ಲ. ಲಿಂಗಸುಗೂರಿನ ಶಾಸಕ **ಬಸವನಗೌಡ** (೧೯೬೧ ಏಪ್ರಿಲ್ ೨೫ ರಂದು) **ಆರ್.ಎಸ್. ಪಾಟೀಲ** (೧೯೬೨ ರ ಆಗಸ್ಟ್ ೨ ರಂದು) ಅವರುಗಳು ಸದನದಲ್ಲಿ ನಾಮಕರಣದ ವಿಚಾರವನ್ನು ಪ್ರಸ್ತಾಪಿಸಿದರು. ೫೧ ಜನ ಸದಸ್ಯರು ಈ ನಿರ್ಣಯವನ್ನು ತಿಳಿಸಿದ್ದರೂ ಗೊತ್ತುವಳಿ ಮತಕ್ಕೆ ಬೀಳುವಾಗ ನಿರಾಸೆ ಕಾದಿತ್ತು. ಈ ಮಧ್ಯೆ **ತುರ್ತು ಪರಿಸ್ಥಿತಿಯ** ಕಾರಣಗಳು ನೆಪವಾದವು.

**ದೊಡ್ಡಮೇಟಿಯವರು** ಈ ನಾಮಕರಣದ ಪ್ರಸ್ತಾವವನ್ನು ಮೇಲಿಂದ ಮೇಲೆ ಸದನದಲ್ಲಿ ಮಂಡಿಸುತ್ತಲೇ ಇದ್ದರು. 'ಕರ್ನಾಟಕ' ಎಂಬ ಹೆಸರನ್ನು ನಾಡಿಗೆ ಇಡದೆ ತಮಗೆ ವಿಶ್ರಾಂತಿಯೇ ಇಲ್ಲವೆನ್ನುವಷ್ಟು ಅವರು ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಕೇವಲ ರಾಜಕಾರಣಿಗಳನ್ನಷ್ಟೇ ಅಲ್ಲದೆ ನಾಡಿನ ಕವಿಗಳು, ಚಿಂತಕರು, ಕಲಾವಿದರೊಂದಿಗೂ ಈ

ಕುರಿತ ಚರ್ಚೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವಂತೆ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ.[೪] ದೊಡ್ಡಮೇಟಿ ಅವರು ೧೯೬೬ ರ ಜುಲೈ ೩೦, ನವೆಂಬರ್ ೨೪, ೨೬ ರಂದು ಮತ್ತೆ ಮತ್ತೆ ನಾಮಕರಣದ ವಿಚಾರವನ್ನು ಮಂಡಿಸಿದರಾದರೂ ಯಾವುದೇ ಪ್ರಗತಿ ಕಾಣದೆ ಅನಿರ್ದಿಷ್ಟಕಾಲ ಈ ಪ್ರಸ್ತಾವವನ್ನು ಮುಂದೂಡುತ್ತಲೆ ಹೋಯಿತು. ಆದರೂ ದೊಡ್ಡಮೇಟಿ ಅವರು ತಮ್ಮ ಕಾರ್ಯ ಚಟುವಟಿಕೆಗಳಿಂದ ವಿಮುಖರಾಗದೆ ಇದ್ದುದು ಗಮನಾರ್ಹವಾದುದು.

ಕನ್ನಡ ಸೃಷ್ಟಿಶೀಲರ ಪ್ರಯತ್ನಗಳು, ಚಟುವಟಿಕೆಗಳು ಈ ಕುರಿತಂತೆ ಸದಾ ಚಾಲ್ತಿಯಲ್ಲಿಯೇ ಇದ್ದವು. ನಾಡು ಏಕೀಕರಣಗೊಂಡರೂ 'ಕರ್ನಾಟಕ'ವೆಂದು ಅಧಿಕೃತವಾಗಿ ಕರೆಸುಕೊಳ್ಳುವಲ್ಲಿ **ಸಂವಿಧಾನಾತ್ಮಕ ಅನುಮೋದನೆ** ಅವಶ್ಯಕವಾಗಿದ್ದಿತು. ಆದರೆ ಈ ರಾಜಕಾರಣದ ಗೋಸುಂಬೆತನಗಳಿಗೆ ಸಾಹಿತಿ-ಕಲಾವಿದರು ಸೊಪ್ಪು ಹಾಕಲಿಲ್ಲ. ಬದಲಾಗಿ ತಮ್ಮದೇ ಆದ ಅಭಿವ್ಯಕ್ತಿ ನೆಲೆಗಳಲ್ಲಿ 'ಕರ್ನಾಟಕ'ವನ್ನು ಅನಾವರಣಗೊಳಿಸುತ್ತಲೇ ಇದ್ದುದು ಗಮನಾರ್ಹವಾದುದು. ಕವಿ ಕುವೆಂಪು ಅವರು -

> ''ಬಹಳ ಕಾಲದಿಂದಲೂ ಭೌಗೋಳಿಕವಾಗಿ ಬೇರೆ ಬೇರೆ ಹೆಸರಿದ್ದ, ಬಹು ರಾಜ್ಯಗಳಲ್ಲಿ ಹಂಚಿ ಹೋಗಿದ್ದಾಗಲೂ, ಯಾವ ಪ್ರದೇಶವನ್ನು ಕವಿಗಳೂ, ಸಾಹಿತಿಗಳೂ, ಮತಪ್ರಚಾರಕರೂ, ಜಗದ್ಗುರುಗಳೂ, ಮಹಾಜನರೂ, ಇತಿಹಾಸಕಾರರೂ, ವಿದೇಶೀಯ ಪ್ರವಾಸಿಗಳೂ 'ಕರ್ನಾಟಕ' ಎಂದು ಕರೆದೂ ಕರೆದೂ ಅದನ್ನೊಂದು 'ಮಂತ್ರ'ವನ್ನಾಗಿ ಮಾಡಿ, ಅದಕ್ಕೆ 'ಶಕ್ತಿ' ನೀಡಿದ್ದಾರೆಯೋ ಆ ಪ್ರದೇಶಕ್ಕೆ 'ಕರ್ನಾಟಕ' ಎಂಬ ಹೆಸರು ಅತ್ಯಂತ ಸಮಂಜಸವೂ ಉಚಿತವೂ ಆಗಿದೆ''.

- ಎನ್ನುವುದರ ಮುಖೇನ ತಮ್ಮ ದಿಟ್ಟ ನಿಲುವನ್ನು ಅಭಿವ್ಯಕ್ತಿಸಿದ್ದರು. ಸಾಹಿತಿ-ಕಲಾವಿದರು-ವಿದ್ವಾಂಸರಲ್ಲಿ ಸಾಂಸ್ಕೃತಿಕವಾಗಿ ದತ್ತವಾಗಿದ್ದ, ಶತಮಾನಗಳ ಚರಿತ್ರೆ ಹೊಂದಿದ್ದ 'ಕರ್ನಾಟಕ' ಹೆಸರಿನ ಬಗೆಗೆ ಯಾವುದೇ ಗೊಂದಲಗಳು ಇರಲಿಲ್ಲ. ಆದರೆ ರಾಜಕಾರಣಿಗಳಲ್ಲಿ ಕೆಲವರು ತಮ್ಮ ಸ್ವಾರ್ಥ ನಿಲುವುಗಳಿಂದ ನಾಡಿನ ಏಕೀಕರಣ ಪ್ರಕ್ರಿಯೆಗೆ ಹೇಗೆ ತೊಂದರೆಗಳನ್ನು ಕೊಡುತ್ತಿದ್ದರೋ ಅದೇ ರೀತಿಯಲ್ಲಿ ನಾಮಕರಣದ ವಿಚಾರದಲ್ಲಿ ಅಡ್ಡಗಾಲು ಹಾಕುತ್ತಿದ್ದರು. ಬಹುಶಃ ಇಲ್ಲಿಯೂ ಏಕೀಕರಣದ ಸಾಕಾರತೆಗೆ

ಇದ್ದಂಥ ಸಾಮಾಜಿಕ, ಆರ್ಥಿಕ, ರಾಜಕಾರಣದ ತಾರತಮ್ಯಗಳು ಕ್ರಮೇಣ ಮುಂದುವರೆದಿದ್ದವು ಎನ್ನಬಹುದು.

ವಿಭಜಿತ ಪ್ರದೇಶಗಳು ಒಂದುಗೂಡುವ ವೇಳೆಗೆ ಅಂದರೆ ೧೯೫೬ ರ ವೇಳೆಗೆ ಇದ್ದ ಜಾತೀಯ ಭಿನ್ನತೆಗಳು ಕನ್ನಡಿಗರನ್ನು ನಾಮಕರಣದ ಸಾಕಾರತೆಗೂ ತೊಡಕುಗಳನ್ನು ಸೃಷ್ಟಿಸಿದ್ದವು. ಹಳೆಯ ಮೈಸೂರಿನ ಒಕ್ಕಲಿಗ-ಗೌಡ ಸಮುದಾಯದವರು ಇತರೆ ಭಾಗಗಳ ವೀರಶೈವ (ಲಿಂಗಾಯತ) ಸಮುದಾಯದವರ ಇಂಗಿತವನ್ನು ಮಾನ್ಯ ಮಾಡಲು ಒಪ್ಪುತ್ತಿರಲಿಲ್ಲ. ಬಹುಪಾಲು ಮೈಸೂರೇತರ ಭಾಗಗಳಲ್ಲಿ ವೀರಶೈವ ಸಮುದಾಯದವರೆ ಪ್ರಬಲರು ಎಂಬ ಭಾವನೆ ಮೈಸೂರಿಗರಿಗೆ ಬಲವಾಗಿ ಮೂಡಿತ್ತು. ಈ ಹಿನ್ನೆಲೆಯಲ್ಲಿಯೆ ಅವರು ಬಯಸುತ್ತಿದ್ದ 'ಕರ್ನಾಟಕ' ಎಂಬ ಹೆಸರಿಗೆ ಬದಲಾಗಿ 'ಮೈಸೂರು' ಎಂಬ ಹೆಸರನ್ನಿಡಲು ಪ್ರಬಲವಾಗಿ ಒತ್ತಾಯಿಸುತ್ತಿದ್ದುದು. ಈ ಮಾತುಗಳು ಪ್ರಾದೇಶಿಕತೆಯ ಹಿನ್ನೆಲೆಗೂ ಅನ್ವಯವಾಗುವಂಥವು. 'ಮೈಸೂರು' ಹಾಗೂ 'ಮೈಸೂರೇತರ' ಎಂಬ ಈ ಎರಡೂ ಬಣಗಳಲ್ಲಿದ್ದ ಕನ್ನಡಿಗರು ತಮ್ಮ ಹಿತಾಸಕ್ತಿಗಳಿಗಾಗಿ ಹೋರಾಟ ನಡೆಸಿದ್ದೇವೆ ಎಂದು ಭಾವಿಸಿದ್ದ ಕಾಲಘಟ್ಟ ಅದು. ಹೀಗಾಗಿ ಮೈಸೂರಿಗರ 'ಮೈಸೂರು ವ್ಯಾಮೋಹ', 'ಮೈಸೂರು ಮಾಯೆ'ಯನ್ನು ಕುರಿತು ಇತರೆ ಭಾಗಗಳಲ್ಲಿನ ಕನ್ನಡಿಗರು ತೀವ್ರವಾಗಿ ಖಂಡಿಸಿ ಮೂದಲಿಸಿದ್ದರು.[೬] ಈ ಮಾತಿನ ಅರ್ಥ ಹಳೆಯ ಮೈಸೂರಿನಲ್ಲಿ 'ಕರ್ನಾಟಕ' ಪರವಾಗಿದ್ದವರು ಇರಲೇ ಇಲ್ಲ ಎಂದಲ್ಲ. ಬದಲಾಗಿ ಮೈಸೂರು ಹಾಗು ಮಹಾರಾಜರ ಬಗೆಗೆ ತೀವ್ರವಾದ ಭಾವನಾತ್ಮಕ ನಿಲುವುಗಳನ್ನು ಪ್ರದರ್ಶಿಸುತ್ತಿದ್ದವರ ನಡುವೆ ಈ ಕುರಿತು ಗೌಣವಾಗಿ ಪ್ರತಿಕ್ರಿಯಿಸಬೇಕಾದ ಸನ್ನಿವೇಶ ನಿರ್ಮಾಣ ಆಗಿತ್ತು. ತಮ್ಮ ಶ್ರೇಷ್ಠತೆಯನ್ನೇ ಸಾರುವ ಮೈಸೂರಿಗರನ್ನು ಕುರಿತು ಆಲೂರ ವೆಂಕಟರಾಯರು ಆ **ಹೆಮ್ಮೆಯ** ಕುಲ ನಿರ್ನಾಮ ಆಗುವವರೆಗೆ ಹೊಸ ರಾಜ್ಯಕ್ಕೆ ಯಶಸ್ಸು ದೊರೆಯದು ಎಂದು ಜರಿದಿರುವುದೂ ಉಂಟು.[೭]

'ಮೈಸೂರು' ಎಂಬ ಹೆಸರಿನ ಹಿಂದೆ ಇರುವ ಚರಿತ್ರೆಯನ್ನು ಕೆದಕಿದ ಅನೇಕರು ಈ ಕುರಿತು ವ್ಯಂಗ್ಯದ ಮಾತುಗಳನ್ನು ಸಹ ಆಡಿದ್ದು ಉಂಟು. ಏಕೆಂದರೆ ಹಿಂದಿನ 'ಪುರಗೆರೆ' ಹೆಸರಿಗೆ ಬದಲಿಗೆ **ಮಹೀಶೂರ** ಅಥವಾ **ಮಹಿಷಾಸುರ** ಎಂಬ ರಾಕ್ಷಸನ ಹೆಸರನ್ನು ಇಟ್ಟುಕೊಂಡು ಸಂಭ್ರಮಿಸುವ ಔಚಿತ್ಯವಾದರೂ ಏನು ಎಂಬ ವಿಚಾರದಲ್ಲಿ. ಒಡೆಯರ ವಂಶಜರು ಸಹ ತಮ್ಮ ಸಾಹಿತ್ಯ-ಸಂಸ್ಕೃತಿ ವಿಚಾರಗಳಲ್ಲಿ 'ಕರ್ನಾಟಕ' ಎಂಬ ಹೆಸರಿನ

ಉಲ್ಲೇಖಗಳನ್ನು ದಾಖಲಿಸಿದ್ದುದು ಮನವರಿಕೆ ಮಾಡಿಕೊಡುವ ಪ್ರಸಂಗಗಳು ಸೃಷ್ಟಿ ಆದವು. ಇದರಿಂದಲೂ ಉಪಯೋಗ ಆಗಲಿಲ್ಲ. ಈ ಬಗೆಗೆ ಮೈಸೂರಿಗರು ತಮ್ಮ 'ಹಟಮಾರಿತನ'ವನ್ನು ಬಿಡಬೇಕೆಂದು ಹುಬ್ಬಳ್ಳಿ-ಧಾರವಾಡದ ನಿಯತಕಾಲಿಕೆಗಳಲ್ಲಿ ಅಲ್ಲಿನ ಕನ್ನಡಿಗರು ಎಚ್ಚರಿಸಿದರು.[೮] ಅಲ್ಲದೆ ನಾಡು 'ಕರ್ನಾಟಕ' ಹೆಸರನ್ನು ಅಧಿಕೃತವಾಗಿ ಹೊಂದಬೇಕು ಎನ್ನುವ ವಿಚಾರದಲ್ಲಿ ಅಂದಿನ ಅನೇಕ ದಿನಪತ್ರಿಕೆಗಳು, ನಿಯತಕಾಲಿಕೆಗಳು ಪದೇ ಪದೇ ಲೇಖನಗಳನ್ನು ಪ್ರಕಟಿಸಿ ಪ್ರೇರಣೆ ನೀಡುತ್ತಿದ್ದುದು ಗಮನಾರ್ಹವಾದುದು. ಈ ಹಿನ್ನೆಲೆಯಲ್ಲಿ ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಕನ್ನಡ ಪ್ರಭ, ತಾಯಿನಾಡು, ನವಭಾರತ, ಜನಪ್ರಗತಿ, ಪ್ರಜಾಮತ, ಪ್ರಪಂಚ ಮೊದಲಾದವುಗಳನ್ನು ಉಲ್ಲೇಖಿಸಬಹುದು.

ಕರ್ನಾಟಕದ ಭಾಗವಾಗಿ ಮೈಸೂರನ್ನು ಪರಿಗಣಿಸದ ವ್ಯಕ್ತಿಗಳೂ ಸಹ ಅಂದು ಅನೇಕ ತೊಡಕುಗಳಿಗೆ ಕಾರಣರಾಗಿದ್ದರು. ಹೀಗಾಗಿ ಸದನದಲ್ಲಿ ಈ ವಿಚಾರ ಎಷ್ಟು ಭಾರಿ ಚರ್ಚೆಗೆ ಬಂದರೂ ನಿರ್ಣಯ ತೆಗೆದುಕೊಳ್ಳಲು ಸಾಧ್ಯ ಆಗುತ್ತಲೇ ಇರಲಿಲ್ಲ. ಇತರೆ ಭಾಷಿಕರು ತಮ್ಮ ರಾಜ್ಯಗಳ ಹೆಸರನ್ನು ಬದಲಿಸುವಾಗ ಕನ್ನಡಿಗರಷ್ಟು ದೀರ್ಘಕಾಲ ಚರ್ಚಿಸುವ ಪ್ರಮೇಯವೆ ಒದಗಿ ಬಂದಿರಲಿಲ್ಲ. ಆದ್ದರಿಂದಲೆ **ಮಹಾರಾಷ್ಟ್ರ, ಗುಜರಾತ್, ತಮಿಳುನಾಡು, ಆಂಧ್ರಪ್ರದೇಶ, ಕೇರಳ** ಮೊದಲಾದ ರಾಜ್ಯಗಳ ಹೆಸರುಗಳು ತಮ್ಮ ತಮ್ಮ ವಿಧಾನಸಭೆಗಳಲ್ಲಿ ಸುಲಭವಾಗಿ ನಿರ್ಣಯಗೊಂಡು ಜಾರಿಗೆ ಬಂದಿದ್ದವು. ಕೇವಲ ಒಂದು ನಗರದ ಹೆಸರನ್ನು ರಾಜ್ಯವೊಂದಕ್ಕೆ ಇಡಲು ಯಾರು ಪ್ರಯತ್ನಿಸಿರಲಿಲ್ಲ. ತಮ್ಮ ಭಾಷಿಕ ನೆಲೆಗಳ ಹಿನ್ನೆಲೆಯಲ್ಲಿಯೂ **ಜರ್ಮನಿ, ಇಂಗ್ಲೆಂಡ್, ಫ್ರಾನ್ಸ್, ಪೋರ್ಚುಗಲ್, ಬರ್ಮಾ, ಸ್ಪೇನ್, ನೇಪಾಳ, ಟಿಬೇಟ್, ತುರ್ಕಿಸ್ಥಾನ್** - ಮೊದಲಾದವು ನಾಮಕರಣಗೊಂಡಿದ್ದ ಉದಾಹರಣೆಗಳು ಸಹ ನಮ್ಮ ಮುಂದಿದ್ದವು. ಬ್ರಿಟಿಷರ ವಸಾಹತು ಮನೋಚಿಂತನೆಗಳು ಮೈಸೂರಿಗರನ್ನು ಆಪ್ತವಾಗಿ ಪ್ರಭಾವಿಸಿದಷ್ಟು ಇನ್ನಿತರೆ ಪ್ರದೇಶಗಳವರನ್ನು ಪ್ರಭಾವಿಸಿರಲಿಲ್ಲ. ಈ ದಿಸೆಯಿಂದಲೂ ಅನೇಕರು ಮೈಸೂರಿಗರನ್ನು 'ಮೈಸೂರ್' ಎಂಬ ಪದವು 'ದಾಸ್ಯದ ಸಂಕೇತ' ಎಂದು ಜರಿದದ್ದು ಸಹ ಇದೆ. ಅಲ್ಲದೆ ಕನ್ನಡಿಗರು 'ಕರ್ನಾಟಕ ಮಾತೆಯ ಮಕ್ಕಳು' ಎನಿಸಿಕೊಳ್ಳುವುದಕ್ಕೂ 'ಮೈಸೂರು ಮಕ್ಕಳು' (ಮಹಿಷಾಸುರನೆಂಬ ರಾಕ್ಷಸನ ಮಕ್ಕಳು) ಎಂದು ಕರೆಸಿಕೊಳ್ಳುವುದಕ್ಕೂ ಇರುವ ಭಿನ್ನತೆಗಳ ಬಗೆಗೂ ಗಮನ ಸೆಳೆಯಲಾಯಿತು.

ನಾಡು ಏಕೀಕರಣಗೊಳ್ಳುವ ಪ್ರಕ್ರಿಯೆಯ ದಿಸೆಯಲ್ಲಿದ್ದಾಗ ಅನೇಕ ಸಮಿತಿಗಳು ಈ ಕುರಿತು ಪರಿಶೀಲಿಸಿ ವರದಿಗಳನ್ನು ನೀಡಿದ್ದವು. ಅವು ತಮ್ಮ ವರದಿಯಲ್ಲಿ 'ಕರ್ನಾಟಕ'ವೆಂತಲೇ ಪ್ರಸ್ತಾಪಿಸಿವೆ. **ವಾಂಚೂ, ಧರ್, ಜೆ.ವಿ.ಪಿ ಸಮಿತಿ, ರಾಜ್ಯ ಪುನರ್‌ಘಟನಾ ಆಯೋಗ**ಗಳು ಸಹ ಕನ್ನಡ ಪ್ರದೇಶಗಳನ್ನು 'ಕರ್ನಾಟಕ' ಭೌಗೋಳಿಕ ಪರಿಸರವವೆಂದೇ ಉಲ್ಲೇಖಿಸಿದ್ದವು. ಆದರೂ ಸದನದಲ್ಲಿನ ಸದಸ್ಯರು ಈ ಕುರಿತು ಅಂತಿಮ ತೀರ್ಮಾನಕ್ಕೆ ಬರದೆ ಕೇವಲ ಮುಂದೂಡುವ ಪ್ರಕ್ರಿಯೆಯಲ್ಲಿ ತೊಡಗಿದ್ದರು.

ಮೈಸೂರು ರಾಜ್ಯಕ್ಕೆ ವಿದೇಶಿ ವಿನಿಮಯದ ಮೊತ್ತವನ್ನು ತಂದುಕೊಡುತ್ತಿದ್ದ ಅನೇಕ ಕಾರ್ಖಾನೆ ([illegible]) ಉತ್ಪನ್ನಗಳು 'ಕರ್ನಾಟಕ' ಎಂಬ ಹೆಸರಿನಿಂದ ಮೂಲೆ ಗುಂಪಾಗುವ ಸಾಧ್ಯತೆಯ ([illegible])ನ್ನು ಕೆಲವರು ಮಂಡಿಸಿದ್ದರು. ಮೈಸೂರು ಗಂಧ, ಸೋಪು, ರೇಷ್ಮೆ, ಕಬ್ಬಿಣ-ಉಕ್ಕು ಮುಂತಾದವುಗಳು 'ಮೈಸೂರು' ಎಂಬ ಹೆಸರಿನಿಂದಲೇ ಖ್ಯಾತಿ ಪಡೆದಿವೆ ಎಂಬುದು ಇವರ ವಾದ. ಆದರೆ ನಾಡಿಗೆ 'ಕರ್ನಾಟಕ'ವೆಂದು ಹೆಸರಿಟ್ಟರೆ ಇವುಗಳಿಗೂ ಅದೇ ಹೆಸರನ್ನು ಇಡಬೇಕೆಂದು ಒತ್ತಾಯ ಬರುವ ಪ್ರಸಂಗವೇ ಇರಲಿಲ್ಲ. ನೆಪಕ್ಕಾಗಿ ಆರ್ಥಿಕ ವಿಚಾರಗಳನ್ನು ಸಹ ನಾಮಕರಣದ ವಿಳಂಬಕ್ಕೆ ತಳಕು ಹಾಕಲಾಯಿತು.

ನಾಡಿಗೆ 'ಮೈಸೂರು ರಾಜ್ಯ' ಎಂಬ ಹೆಸರು ಸರಿಹೊಂದುವುದಿಲ್ಲವೆಂಬ ಅರಿವು ಕನ್ನಡಿಗರಲ್ಲಿತ್ತು. ಈ ಕುರಿತು ಮಾನಸಿಕವಾಗಿಯಷ್ಟೇ ಅಲ್ಲದೆ ಭಾವನಾತ್ಮಕ ನೆಲೆಗಳಲ್ಲಿಯೂ ತಮ್ಮ ಸಂಘ-ಸಂಸ್ಥೆಗಳ ಕಾರ್ಯ ಚಟುವಟಿಕೆಗಳ ಮುಖೇನ ರುಜುವಾತುಪಡಿಸಿದ್ದರು. ಸಾಹಿತಿ-ಕಲಾವಿದರಂತೂ ಮೊದಲಿನಿಂದಲೂ ಈ ದಿಸೆಯಲ್ಲಿಯೆ ಚಿಂತನೆ ನಡೆಸಿದ್ದರು. ತಮ್ಮ ಕತೆ, ಕವನ, ನಾಟಕ, ಕಾದಂಬರಿ ಪ್ರಕಾರಗಳಲ್ಲಿ 'ಕರ್ನಾಟಕ' ಶಬ್ದದ ಉಲ್ಲೇಖಗಳೇ ಅಭಿವ್ಯಕ್ತಿ ಪಡೆದಿದ್ದವು. ಆದರೆ ಕೆಲವು ಸ್ವಾರ್ಥ, ಸಂಕುಚಿತ ರಾಜಕಾರಣಿಗಳಿಂದಾಗಿ ಈ ನಾಮಕರಣದ ಸಮಸ್ಯೆ ಮತ್ತಷ್ಟು ಜಟಿಲ ಆಗುತ್ತಾ ಹೋಯಿತು. ಏಕೀಕರಣಕ್ಕೆ ಮೊದಲು ಹಾಗು ಅನಂತರ ಕನ್ನಡದ ಎಲ್ಲ ಪ್ರದೇಶಗಳಲ್ಲಿಯೂ 'ಕರ್ನಾಟಕ' ಹೆಸರಿನ ಸಂಘ-ಸಂಸ್ಥೆಗಳು ಹುಟ್ಟಿಕೊಂಡಿದ್ದವು. ಅಲ್ಲದೆ ಇವುಗಳಿಂದಾಗಿ ಕನ್ನಡಿಗರು ಸಾಂಸ್ಕೃತಿಕವಾಗಿ ತಮ್ಮ ಅನನ್ಯತೆ-ಅಸ್ಮಿತೆಗಳನ್ನು ವ್ಯಕ್ತಪಡಿಸಲು ಸಹ ಕಾರಣವಾಗಿದ್ದೂ ಉಂಟು. ಈ ಮಾತು ನಾಡಿನ ರಾಜಕಾರಣ, ಸಮಾಜ, ಆರ್ಥಿಕತೆ, ಔದ್ಯೋಗೀಕರಣ, ಸಾಹಿತ್ಯ-ಸಂಸ್ಕೃತಿ ವಿಚಾರಗಳ ಆಶಯದಿಂದ ಕಾರ್ಯನಿರ್ವಹಿಸುತ್ತಿದ್ದ ಎಲ್ಲ ಸಂಸ್ಥೆಗಳಿಗೂ ಅನ್ವಯ ಆಗುವಂಥದ್ದು.

5087 - 8

ಬಿ.ಎಂ.ಶ್ರೀ., ಕುವೆಂಪು, ಮಾಸ್ತಿ, ಟಿ.ಎಸ್. ವೆಂಕಣ್ಣಯ್ಯ, ಅ.ನ. ಕೃಷ್ಣರಾವ್, ತಿ.ತಾ. ಶರ್ಮ, ಆಲೂರ ವೆಂಕಟರಾವ್ ಮೊದಲಾದವರು ಅನೇಕ ಶಾಲಾ-ಕಾಲೇಜುಗಳಲ್ಲಿ 'ಕರ್ನಾಟಕ ಸಂಘ'ಗಳ ಹುಟ್ಟಿಗೆ ಕಾರಣ ಆಗಿದ್ದರು. ಕರ್ನಾಟಕತ್ವವನ್ನು ಅಭಿವ್ಯಕ್ತಿಸುವ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ, ಕರ್ನಾಟಕ ಖಾದಿ ಗ್ರಾಮೋದ್ಯೋಗ ಸಂಘ, ಕರ್ನಾಟಕ ಸೇವಾದಳ, ಕರ್ನಾಟಕ ಜನಸಂಘ, ಕರ್ನಾಟಕ ಸ್ವತಂತ್ರ ಪಕ್ಷ, ಕರ್ನಾಟಕ ಕಮ್ಯುನಿಸ್ಟ್, ಕರ್ನಾಟಕ ಹರಿಜನ ಸೇವಾ ಸಂಘ, ಕರ್ನಾಟಕ ಇತಿಹಾಸ ಮಂಡಲ, ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಕಾಲೇಜ್, ಕರ್ನಾಟಕ ಗಾಂಧಿ ಸೇವಾ ಸಂಘ, ಕರ್ನಾಟಕ ಮಕ್ಕಳ ಕೂಟ, ಕರ್ನಾಟಕ ಸಾಹಿತ್ಯ ಪರಿಷತ್ತು, ಕರ್ನಾಟಕ ವಿಶ್ವವಿದ್ಯಾಲಯ, ಮೊದಲಾದ ನೂರಾರು ಸಂಘ-ಸಂಸ್ಥೆಗಳು ನಾಡಿನಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಆದರೆ ಏಕೀಕೃತ ರಾಜ್ಯಕ್ಕೆ ಮಾತ್ರ 'ಮೈಸೂರು ರಾಜ್ಯ' ವೆಂತಲೇ ಕರೆದು ನಗೆಪಾಟಲಿಗೆ ಈಡಾಗುವಂತಾಗಿತ್ತು. ಇಂಥ ಹಲವು ಉದಾಹರಣೆಗಳ ಹಿನ್ನೆಲೆಯಲ್ಲಿ 'ಕರ್ನಾಟಕ'ದ ಅಸ್ತಿತ್ವದ ಪ್ರಶ್ನೆಗಳು ಪ್ರಬಲ ಆಗತೊಡಗಿದವು. ಈ ಮಧ್ಯೆ ೧೯೬೦ರ ದಶಕದ ಕೊನೆಯ ವೇಳೆಗೆ ಅನೇಕ ಕನ್ನಡ ಚಳವಳಿಕಾರರು (ಅ.ನ.ಕೃ, ಮ.ರಾಮಮೂರ್ತಿ ಮೊದಲಾದವರು) ತಮ್ಮ ಮುಖ್ಯ ಧ್ಯೇಯವನ್ನಾಗಿ ನಾಡಿನ ನಾಮಕರಣವನ್ನು ತೆಗೆದುಕೊಂಡಿದ್ದರು. ಇಂಥ ಒತ್ತಡಗಳು ಹಾಗು ಕನ್ನಡ ಸಂಘಗಳ ಪ್ರಯತ್ನಗಳು ೧೯೭೦ರ ದಶಕದ ಮೊದಲ ವರುಷಗಳಲ್ಲಿ ರಾಜಕಾರಣಿಗಳನ್ನು ಇನ್ನಷ್ಟು ವಿಳಂಬವಾಗುವುದನ್ನು (ನಾಮಕರಣದ ವಿಚಾರದಲ್ಲಿ) ತಡೆಗಟ್ಟಿದಂತೆ ಮಾಡಿದವು. ಅಲ್ಲದೆ ೧೯೧೫ ರಿಂದಲೂ ಕನ್ನಡ ಸಾಹಿತ್ಯ ಪರಿಷತ್ತು (ಈ ಸಂಸ್ಥೆಯ ಮೊದಲಿನ ಹೆಸರು 'ಕರ್ನಾಟಕ ಸಾಹಿತ್ಯ ಪರಿಷತ್ತು' ಆಗಿತ್ತು). ನಾಡಿನ ಹಾಗು ಗಡಿ ಪ್ರದೇಶಗಳಲ್ಲಿ ತನ್ನ ಅಧಿವೇಶನಗಳನ್ನು ನಡೆಸಿ 'ಕರ್ನಾಟಕ' 'ಕನ್ನಡಿಗ' ಹಾಗು 'ಕನ್ನಡ' ಭಾಷೆಗಳ ಬಗೆಗೆ ಅಭಿಮಾನ ಮೂಡಿಸುತ್ತಿತ್ತು. ಈ ಸಾಹಿತ್ಯ ಸಮ್ಮೇಳನಗಳಲ್ಲಿ ತೆಗೆದುಕೊಳ್ಳಲಾಗುತ್ತಿದ್ದ ನಿರ್ಣಯಗಳು ಹಾಗು ಸಮ್ಮೇಳನಾಧ್ಯಕ್ಷರ ಭಾಷಣಗಳು 'ಕರ್ನಾಟಕ'ದ ಅನನ್ಯತೆ-ಅಸ್ಮಿತೆಗಳಿಗೆ ಸಂಬಂಧಪಟ್ಟವೇ ಆಗಿರುತ್ತಿದ್ದವು.[೯] ಇದರಿಂದ ನಾಡು ಆಡಳಿತಾತ್ಮಕ (ರಾಜಕೀಯ)ವಾಗಿ ಒಂದುಗೂಡಿರುವುದು ಸಾಂಸ್ಕೃತಿಕ ಏಕೀಕರಣದ ದೆಸೆಯಿಂದಲೇ ಎಂಬುದು ಸ್ಪಷ್ಟ ಆಗುತ್ತಿತ್ತು. ಆದರೆ ಇದನ್ನು ಬಹಳಷ್ಟು ರಾಜಕಾರಣಿಗಳು ಆ ಹೊತ್ತಿಗಷ್ಟೇ ಅಲ್ಲ ಇಂದಿಗೂ ಅರ್ಥಮಾಡಿಕೊಂಡಿಲ್ಲ ಎಂದರೂ ತಪ್ಪಿಲ್ಲ. ಏಕೆಂದರೆ ತಮ್ಮ ರಾಜಕಾರಣದ ದೆಸೆಯಿಂದಲೇ ಈ ನಾಡು-ನುಡಿ-ಸಂಸ್ಕೃತಿಗಳ ಅಳಿವು-ಉಳಿವು

ಎಂದು ಭಾವಿಸುವುದುಂಟು. ಬೇಂದ್ರೆ, ಕುವೆಂಪು ಅವರಂಥ ಸಾಹಿತಿಗಳು ನಾಡಿಗೆ 'ಕರ್ನಾಟಕ' ಎಂಬ ಹೆಸರನ್ನಿಡಲು ಏಕೀಕರಣವಾದಾಗಿನಿಂದಲೂ ಒತ್ತಾಯಿಸುತ್ತಲೇ ಇದ್ದರು. ಆದರೆ ರಾಜಕಾರಣದ ವೇದಿಕೆಯಾದ ಸದನದಲ್ಲಿ ಈ ಬಗೆಗೆ ಒಮ್ಮತವೇರ್ಪಡುತ್ತಲೆ ಇರಲಿಲ್ಲ.

ಕನ್ನಡ ಪ್ರದೇಶಗಳು ೧೯೫೬ ರಲ್ಲಿ ಒಂದುಗೂಡಿ 'ವಿಶಾಲ ಮೈಸೂರು ರಾಜ್ಯ'ವೆಂದು ಕರೆಸಿಕೊಂಡಾಗ ಎಸ್. ನಿಜಲಿಂಗಪ್ಪ ಅವರು ಮುಖ್ಯಮಂತ್ರಿಗಳಾದರು. ಕೆಂಗಲ್ಲರು ಈ ಬಗೆಗೆ ಉತ್ಸುಕರಾಗಿದ್ದರೂ ಅವರ ಸೀಮಿತ ಅವಧಿಯಲ್ಲಿ ಏನನ್ನೂ ಮಾಡಲು ಆಗಿರಲಿಲ್ಲ. ಈ ಕುರಿತ ಅವರ ಶ್ರಮ, ಕಾಳಜಿ ದೊಡ್ಡದು. ಅಲ್ಲಿಂದ ಮೊದಲ್ಗೊಂಡು ಕಡಿದಾಳ್ ಮಂಜಪ್ಪ, ಬಿ.ಡಿ. ಜತ್ತಿ, ಎಸ್.ಆರ್. ಕಂಠಿ, ವೀರೇಂದ್ರ ಪಾಟೀಲರಾದಿಯಾಗಿ ಯಾವ ಮುಖ್ಯಮಂತ್ರಿ ನಾಡಿನ ಹೆಸರು ಬದಲಿ ಮಾಡಲು ಆಗಿರಲಿಲ್ಲ. ಆದರೆ ಇದು ಸಾಧ್ಯ ಆಗಿದ್ದು ಡಿ. ದೇವರಾಜ ಅರಸು ಅವರು ಮುಖ್ಯಮಂತ್ರಿ ಆದಾಗ ಮಾತ್ರ. ಅಂದರೆ ೧೮.೭.೧೯೭೨ ರಂದು ರಾಜ್ಯ ಸಚಿವ ಸಂಪುಟದಲ್ಲಿ ಈ ಬಗೆಗೆ ದಿಟ್ಟವಾದ ನಿರ್ಣಯವನ್ನು ತೆಗೆದುಕೊಳ್ಳುವವರೆಗೆ. ಈ ಹಂತದವರೆವಿಗೂ ಎಲ್ಲ ಬಗೆಯ ತಾರತಮ್ಯಗಳು, ಜಾತಿ ರಾಜಕಾರಣ ಮೊದಲಾದವು ಒಮ್ಮತ ಅಭಿಪ್ರಾಯಕ್ಕೆ ವಿರುದ್ಧವಾಗಿಯೇ ನಡೆದಂಥವು. ಅಂದರೆ ಹಲವು ಶತಮಾನಗಳಿಂದಲೂ ನಾಡಿಗೆ ದತ್ತವಾಗಿದ್ದ 'ಕರ್ನಾಟಕ' ಎಂಬ ಹೆಸರನ್ನು ಏಕೀಕರಣದ ಅನಂತರ ಅಧಿಕೃತವಾಗಿ ನಾಮಕರಣ ಮಾಡಲು ಹದಿನೇಳು ವರುಷಗಳೇ ಬೇಕಾಯಿತು. ಬಹುಶಃ ಈ ಬಗೆಯ ಚರಿತ್ರೆ ಯಾವ ರಾಜ್ಯಕ್ಕೂ ಇರಲಾರದು.

ದೇವರಾಜ ಅರಸು ಅವರು ಸಹ ಆರಂಭದಲ್ಲಿ ನಾಡಿನ ಹೆಸರನ್ನು ಬದಲಾಯಿಸುವುದರ ಬಗೆಗೆ ನಿಖರವಾದ, ಸ್ಪಷ್ಟವಾದ ನಿಲುವನ್ನೇನು ಹೊಂದಿರಲಿಲ್ಲ. ಅವರು ವೈಯಕ್ತಿಕವಾಗಿ ನಾಡಿನ ಹೆಸರನ್ನು ಬದಲಾಯಿಸಿದಾಕ್ಷಣ ಇನ್ನೆಲ್ಲವೂ ಬದಲಾಗುತ್ತದೆ, ಸಮಸ್ಯೆಗಳು ಪರಿಹಾರವಾಗಿ ಅಭಿವೃದ್ಧಿ ದಿಸೆಯಲ್ಲಿ ನಡೆದುಬಿಡುತ್ತೇವೆ ಎಂದು ನಂಬಿದವರಲ್ಲ. ಸಾರ್ವಜನಿಕವಾಗಿಯೂ ಈ ಬಗೆಗೆ ಅವರು ಪ್ರಸ್ತಾಪಿಸಿದ್ದೂ ಉಂಟು. ಇದರಿಂದ ಅರಸು ಅವರು 'ಕರ್ನಾಟಕ' ಎಂಬ ಹೆಸರಿಗೆ ವಿರುದ್ಧವಾಗಿರುವವರೆ ಆಗಿದ್ದಾರೆ ಎಂದು ಪ್ರಚಾರ ಆಗಿಬಿಟ್ಟಿತ್ತು.[೧೦] ಏಕೆಂದರೆ ಅರಸು ಅವರು ಈ ಹಿಂದೆ ಶಾಸನ ಸಭೆಯ ಸದಸ್ಯರಾಗಿ, ಮಂತ್ರಿಯಾಗಿದ್ದರೂ ಹೆಸರಿನ ಬಗೆಗೆ ತೀವ್ರವಾಗಿ ಬೆಂಬಲಿಸಿದ ಉದಾಹರಣೆಗಳು ಇರಲಿಲ್ಲ. ವಾಸ್ತವವಾಗಿ ಈ ಘಟ್ಟದಲ್ಲಿ ಅವರು ಹೆಸರಿನ ಪರವಾಗಿಯೂ ಇರಲಿಲ್ಲ.

ಅಂತೆಯೆ ವಿರುದ್ಧವಾಗಿಯೂ ಇದ್ದವರಲ್ಲ. ಆದರೆ ೧೯೭೨ ರ ಚುನಾವಣೆಗಳ ಕಾಲಕ್ಕೆ ಜನಸಾಮಾನ್ಯರ ಅಭಿಲಾಷೆಯನ್ನು ಅರಿತು ನಾಡಿಗೆ 'ಕರ್ನಾಟಕ' ಎಂಬ ಹೆಸರನ್ನಿಡಲು ತಮ್ಮ ಪಕ್ಷಕ್ಕೆ (ಕಾಂಗ್ರೆಸ್) ಬಹುಮತ ಕೋರಿದ್ದರು. ಅಲ್ಲಿಯವರೆಗೂ ಕಾಂಗ್ರೆಸ್ಸಿಗರು ಅದರಲ್ಲೂ ಮೈಸೂರಿನ ಶಾಸಕರು ಈ ಬಗೆಗೆ ಹೆಚ್ಚಿನ ಒಲವು ತೋರಿಸಿರಲಿಲ್ಲ. ತಾವೇ ಮುಖ್ಯಮಂತ್ರಿ ಗಳಾಗಿ ಆಯ್ಕೆಯಾದ ಮೇಲಂತೂ ಈ ವಿಚಾರದಲ್ಲಿ ಅರಸು ಅವರ ಜವಾಬ್ದಾರಿ ಹೆಚ್ಚಾಯಿತು. ಅರಸು ಅವರು ತಾವು ಮುಖ್ಯಮಂತ್ರಿಯಾಗಿ ಅಧಿಕಾರವನ್ನು ಸ್ವೀಕರಿಸುವ ಹಿಂದಿನ ದಿನ ಸಂಬಂಧಿಯೂ, ಆತ್ಮೀಯರೂ ಆಗಿದ್ದ ಸಾಹಿತಿ ಚದುರಂಗರಲ್ಲಿ ಭೋಜನಕ್ಕೆ ಹೋಗಿದ್ದರು. ಆಗ ತಾನು ಮುಖ್ಯಮಂತ್ರಿಯಾಗಿ ನೀಡಬೇಕಾದ ಮೊದಲ ಆದ್ಯತೆಯ ಕೆಲಸಗಳ ಬಗೆಗೆ ಸಲಹೆ ಕೇಳಿದ್ದರು. ಎಂದಿನಂತೆ ಚದುರಂಗರು ನಾಡಿಗೆ 'ಕರ್ನಾಟಕ'ವೆಂದು ನಾಮಕರಣ ಮಾಡಿದಲ್ಲಿ ಭಾವನಾತ್ಮಕವಾಗಿ ಕನ್ನಡಿಗರು ಮೆಚ್ಚಲು ಸಾಧ್ಯ ಎಂಬ ಸಲಹೆಯಿತ್ತಿದ್ದರು. 'ನಿಮ್ಮಂಥ ಸಾಹಿತಿಗಳಲ್ಲಿ ಈ ವಿಚಾರ ಇದ್ದದ್ದೇ' ಎಂದು ಮೂದಲಿಸಿದ್ದ ಅರಸರೆ 'ಮೈಸೂರು ರಾಜ್ಯ'ವನ್ನು 'ಕರ್ನಾಟಕ'ವನ್ನಾಗಿಸಲು ಕಾರಣಕರ್ತರಾಗಿದ್ದು ಗಮನಾರ್ಹ ಸಂಗತಿ.[೮೮]

ಈ ವೇಳೆಗಾಗಲೇ ಮೈಸೂರು ವ್ಯಾಮೋಹಿಗಳಿಗೂ, ಉತ್ತರ ಕರ್ನಾಟಕದ ಕನ್ನಡಿಗರಿಗೂ ಇದ್ದ ತಾರತಮ್ಯದ ನಿಲುವುಗಳು ನಾಡನ್ನು ಮತ್ತೆ ಎಲ್ಲಿ ತುಂಡರಿಸಿಬಿಡುತ್ತವೆಯೋ ಎನ್ನುವಷ್ಟು ಪ್ರಬಲ ಆಗುತ್ತಿದ್ದವು. ಎರಡು ಗುಂಪುಗಳು **ಮೈಸೂರು-ಕರ್ನಾಟಕ, ಕನ್ನಡ ನಾಡು, ಮೈಸೂರು-ಕನ್ನಡ ನಾಡು** ಎಂಬೆಲ್ಲಾ ಹೆಸರುಗಳನ್ನು ಸೂಚಿಸುವ ಮುಖೇನ ರಾಜಿಸೂತ್ರದ ಕಡೆಗೆ ವಾಲಿದ್ದವು. ಈ ಬೆಳವಣಿಗೆಗಳಿಂದಾಗಿ ನಾಡಿಗೆ ಹೆಸರನ್ನು ಬದಲಾಯಿಸುವ ಕಾಲ ಹತ್ತಿರವಾಗುತ್ತಿದೆ ಎಂಬುದು ಮನವರಿಕೆ ಆಗುತ್ತಿತ್ತು. ಇದೇ ವೇಳೆಯಲ್ಲಿಯೇ 'ಕರ್ನಾಟಕ'ವೋ ಅಥವಾ 'ಕರ್ಣಾಟಕ'ವೋ ಎಂಬ ವಾದ-ವಿವಾದಗಳು ಸಾಹಿತಿ-ವಿದ್ವಾಂಸರಲ್ಲಿ ಶುರುವಾಗಿತ್ತು.[೮೯] ಕೊನೆಗೆ ವಿದ್ವಾಂಸರಲ್ಲಿ 'ಕರ್ನಾಟಕ' ಎಂದೇ ಸರಳವಾಗಿ ಕರೆಯುವುದು ಒಳಿತೆಂಬ ಅಭಿಪ್ರಾಯ ಮೂಡಿತ್ತು. ಇವೆಲ್ಲವನ್ನು ಅಭ್ಯಾಸ ಮಾಡಿದ್ದ ಅರಸು ಅವರು ಬಹುಜನರ ಒಪ್ಪಿಗೆ ಮೇರೆಗೆ 'ಕರ್ನಾಟಕ' ಶಬ್ದವನ್ನೇ ಅನುಮೋದಿಸಿದ್ದರು. ಈ ಎಲ್ಲ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಮೊಟ್ಟಮೊದಲ ಬಾರಿಗೆ **೨೭.೭.೧೯೭೨** ರಂದು ಅರಸು ಅವರು 'ಕರ್ನಾಟಕ' ನಾಮಕರಣದ ನಿರ್ಣಯವನ್ನು ಮಂಡಿಸಿ ಭಾಷಣ ಮಾಡಿದರು. ಅದರಲ್ಲಿ ಅವರು -

"..................... ಈಗ್ಗೆ ಒಂದೂವರೆ ತಿಂಗಳ ಹಿಂದೆ ಇಂತಹ ಠರಾವನ್ನು ನಮ್ಮ ಸಚಿವ ಸಂಪುಟದಲ್ಲಿ ಬಹುಜನ ಶಾಸಕರು ಅಭಿಪ್ರಾಯಪಟ್ಟಂತೆ, ಹಾಗೂ ಹೆಚ್ಚು ಜನರು ಅಭಿಪ್ರಾಯಪಡುವಂತೆ ನಮ್ಮ ರಾಜ್ಯಕ್ಕೆ ಒಂದು ಶಾಶ್ವತವಾದ ಹೆಸರನ್ನು ಇಟ್ಟು ಈಗಿನ ಹೆಸರನ್ನು ಬದಲಾವಣೆ ಮಾಡಬಹುದು ಎನ್ನುವ ಒಂದು ತೀರ್ಮಾನಕ್ಕೆ ಬಂದೆವು. ಇಂತಹ ಒಂದು ಬಹುಮತ ಅಭಿಪ್ರಾಯ ಬಂದ ಮೇಲೆ ನಮ್ಮ ಪಕ್ಷದಲ್ಲಿ ಕೂಡ ಇದನ್ನು ನಾವು ಚರ್ಚೆ ಮಾಡಿ ಆಡಳಿತ ಪಕ್ಷವಾದ ಕಾಂಗ್ರೆಸ್ ಪಕ್ಷದವರು ಎಲ್ಲರೂ ಒಪ್ಪಿದಂತೆ ಠರಾವನ್ನು ಇಲ್ಲಿ ತಂದಿದ್ದೇನೆ. ಒಂದು ಸಂತೋಷದ ವಿಚಾರ ಇಲ್ಲಿ ಹೇಳಬೇಕಾಗಿದೆ. ನಮ್ಮ ಪಕ್ಷದಲ್ಲಿ ಕೆಲವು ವಿಚಾರದಲ್ಲಿ ಅಭಿಪ್ರಾಯ ಬೇಧಗಳು ಇದ್ದರೂ ಇದರಲ್ಲಿಲ್ಲ. ಎಲ್ಲರೂ ಇಂತಹ ಒಂದು ಬದಲಾವಣೆಯನ್ನು ಮಾಡಲು ಒಪ್ಪಿದ್ದಾರೆ. ಇದರಲ್ಲಿ ಕೆಲವರು 'ಮೈಸೂರು' ಎಂದು ಇರಬಹುದು ಇಲ್ಲವೇ 'ಕನ್ನಡನಾಡು' ಎಂದು ಇರಬಹುದು ಎಂದು ಹೇಳುವವರು ಅಥವಾ 'ಮೈಸೂರು, ಕನ್ನಡನಾಡು' ಇಲ್ಲವೆ 'ಮೈಸೂರು-ಕರ್ನಾಟಕ' ಎಂದು ಹೇಳುವ ಅಭಿಪ್ರಾಯದವರೂ ಇರಬಹುದು. ಆದರೆ ಪ್ರಜಾಪ್ರಭುತ್ವ ತತ್ವದ ಒಂದು ಅಭಿಪ್ರಾಯಕ್ಕೆ ನಾವು ಕಟ್ಟುಬಿದ್ದಿರುವುದರಿಂದ ಬಹುಮತದ ಅಭಿಪ್ರಾಯದಲ್ಲಿ ಹೆಸರು ಯಾವ ರೀತಿ ಇರಬೇಕೆಂದು ತೀರ್ಮಾನವಾಗುತ್ತದೋ ಆ ತೀರ್ಮಾನವನ್ನು ನಾವೆಲ್ಲರೂ ಒಪ್ಪಿಕೊಂಡು ಹೋಗೋಣ ಎಂದು ಎಲ್ಲರೂ ಒಂದು ದೊಡ್ಡ ಮನೋಭಾವವನ್ನು ಪ್ರದರ್ಶನ ಮಾಡಿದ್ದಾರೆ. ಇದು ಒಂದು ಸಂತೋಷದ ವಿಚಾರ. ಈ ಸಂದರ್ಭದಲ್ಲಿ ನಮ್ಮ ಕಾಂಗ್ರೆಸ್ ಪಕ್ಷ ಈ ದೇಶದ ಹೆಸರಿನ ವಿಚಾರದಲ್ಲಿ ಇಷ್ಟೊಂದು ರೀತಿಯಲ್ಲಿ ಒಮ್ಮತ ಅಭಿಪ್ರಾಯವನ್ನು, ಬೇದ-ಭಾವಗಳೇನೇ ಇರಲಿ, ಈ ಪ್ರದರ್ಶನ ಮಾಡಿರುವುದು ಪ್ರಪ್ರಥಮ ಒಂದು ತಿಳಿಸುವುದಕ್ಕೆ ನಾನು ಇಷ್ಟಪಡುತ್ತೇನೆ......."[೧೩]

- ಎಂದು ಹೇಳುವುದರ ಮುಖೇನ ಠರಾವನ್ನು ಸದಸ್ಯರ ಒಪ್ಪಿಗೆಗಾಗಿ ಮಂಡಿಸಿದರು. ಈ ಠರಾವನ್ನು (ನಿರ್ಣಯವನ್ನು) ಅರಸು ಅವರು ಮಂಡಿಸಿದ ಮೇಲೆ ವಿಧಾನ ಸಭಾಧ್ಯಕ್ಷ (ಕೆ.ಎಸ್. ನಾಗರತ್ನಮ್ಮ)ರು ಅದನ್ನು ಸಭೆಯಲ್ಲಿ -

"ಭಾರತದ ಸಂವಿಧಾನದಲ್ಲಿ ನಮೂದಿಸಿದ ಈ ರಾಜ್ಯದ ಹೆಸರನ್ನು 'ಕರ್ನಾಟಕ' ಎಂಬುದಾಗಿ ಬದಲಾಯಿಸಬೇಕೆಂದು ಈ ಸಭೆಯವರು ತಮ್ಮ ಖಚಿತವಾದ ಸಂವಿಧಾನದ ತಿದ್ದುಪಡಿಗಳನ್ನು ರಾಜ್ಯ ಸರ್ಕಾರದವರು ಪಡೆದುಕೊಳ್ಳಲು ಕ್ರಮಕೈಗೊಳ್ಳಬೇಕೆಂದು ಈ ಸಭೆಯವರು ಶಿಫಾರಸು ಮಾಡುತ್ತಾರೆ"[೧೪]

- ಎಂದು ಘೋಷಿಸುವುದರ ಮುಖೇನ ಮತಕ್ಕೆ ಹಾಕಿದರು. ಈ ಚಾರಿತ್ರಿಕ ನಿರ್ಣಯವು ಯಾರ ವಿರೋಧವೂ ಇಲ್ಲದೆ ಸರ್ವಾನುಮತದಿಂದ ಅಂಗೀಕರಿಸಲ್ಪಟ್ಟಿತು. ಈ ಸಂತಸದಲ್ಲಿ ಅರಸು ಅವರು 'ಕರ್ನಾಟಕಕ್ಕೆ' ಎಂದು ಘೋಷಿಸಿದಾಗ ಸದಸ್ಯರೆಲ್ಲರೂ 'ಜಯವಾಗಲಿ' ಎನ್ನುವುದರ ಮೂಲಕ ಕರತಾಡನ ಮಾಡಿ ಸ್ವಾಗತಿಸಿದರು. ಎಸ್. ಬಂಗಾರಪ್ಪ ಹಾಗು ವಾಟಾಳ್ ನಾಗರಾಜ್ ಅವರು ಮಲ್ಲಿಗೆ ಹೂವುಗಳನ್ನು ಚೆಲ್ಲುವುದರ ಮುಖೇನ ತಮ್ಮ ಸಂತೋಷವನ್ನು ಹಂಚಿಕೊಂಡದ್ದೂ ಉಂಟು.

ನಾಡಿನ ಅಧಿಕೃತ ನಾಮಕರಣದ ಠರಾವು ೨೭.೭.೧೯೭೨ ರಂದು ವಿಧಾನಸಭೆಯ ಒಪ್ಪಿಗೆಯನ್ನು ಹಾಗು ೩೧.೭.೧೯೭೨ ರಂದು ವಿಧಾನ ಪರಿಷತ್ತಿನ ಒಪ್ಪಿಗೆಯನ್ನು ಪಡೆಯಿತು. ಹೀಗಾಗಿ ರಾಜ್ಯದ ಜನರಲ್ಲಿ ಈ ಬಗೆಗೆ ವಿಶ್ವಾಸ ಮೂಡತೊಡಗಿತು. ಈ ವೇಳೆಗಾಗಲೇ ೧೭ ನೆಯ ರಾಜ್ಯೋತ್ಸವದ ದಿನ (೧.೧೧.೧೯೭೨)ವೂ ರಾಜ್ಯ ಸರ್ಕಾರದ ಕಾರ್ಯಕ್ರಮವಾಗಿ ಹೆಚ್ಚಿನ ಮಹತ್ವ ಪಡೆಯಿತು. ಆ ದಿನದಂದು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಮುಖ್ಯಮಂತ್ರಿಯಾಗಿ ಅವರು ರಾಜ್ಯಪ್ರಶಸ್ತಿಗಳನ್ನು ವಿತರಿಸಿದರು. ಈ ಸಮಾರಂಭದಲ್ಲಿ ಅರಸು ಅವರು -

"ನಾವು ಇಂದು ೧೭ನೇ ಕನ್ನಡ ರಾಜ್ಯೋತ್ಸವವನ್ನು ಅಭಿಮಾನದಿಂದಲೂ, ವಿಜೃಂಭಣೆಯಿಂದಲೂ ನಡೆಸುತ್ತಿದ್ದೇವೆ. ಇದುವರೆವಿಗೂ ನಡೆಸಿದಂಥ ಉತ್ಸವಗಳ ನೀತಿಗೂ, ರೀತಿಗೂ, ಇಂದು ನಡೆಯುತ್ತಾ ಇರತಕ್ಕಂಥದಕ್ಕೂ ಒಂದು ಹೆಚ್ಚಿನ ವ್ಯತ್ಯಾಸವಿದೆ. ಈ ೧೭ ನೇ ಉತ್ಸವದಲ್ಲಿ ನಮಗೆಲ್ಲರಿಗೂ ಹೆಚ್ಚು ಆನಂದವನ್ನು ಕೊಡತಕ್ಕ ಪ್ರಸಂಗ ನಡೆದಿದೆ. ಅದೇನೆಂದರೆ, ನಮ್ಮ ರಾಜ್ಯದ ಹೆಸರನ್ನು 'ಕರ್ನಾಟಕ' ಎಂದು ಕರೆಯುವುದಕ್ಕೆ ನಾವು ತೀರ್ಮಾನ ಮಾಡಿರುವುದು. ಇನ್ನೂ ಆಶ್ಚರ್ಯರಾಗಿ ಮತ್ತು ಸಾಂಪ್ರದಾಯಿಕ

> ವಾಗಿ ಈ ಹೆಸರನ್ನು ಬದಲಾವಣೆ ಮಾಡತಕ್ಕಂಥ ಕಾರ್ಯ ಮುಂದಿನ ಒಂದೆರಡು ತಿಂಗಳಲ್ಲಿ ಆಗುವುದರಲ್ಲಿ ಯಾವ ಅನುಮಾನವೂ ಇಲ್ಲ.....''[೧೫]

- ಎಂದು ಭರವಸೆ ನೀಡುವುದರ ಮುಖೇನ ಈ ವಿಚಾರಕ್ಕೆ ನಿಖರತೆ ಬಂದೊದಗಿತು.

ಅಷ್ಟೇ ಅಲ್ಲದೆ ೩೦.೭.೧೯೭೩ ರಂದು ಲೋಕಸಭೆಯ ಹಾಗೂ ೮.೮.೧೯೭೩ ರಂದು ರಾಜ್ಯಸಭೆಯ ಸದಸ್ಯರ ಒಪ್ಪಿಗೆ ಪಡೆದದ್ದು ಗಮನಾರ್ಹವಾದುದು. ಅಂತಿಮವಾಗಿ ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ವಿ.ವಿ. ಗಿರಿ ಅವರು ದಿನಾಂಕ ೮.೧೦.೧೯೭೩ ರಂದು ತಮ್ಮ ಅಧಿಕೃತ ಒಪ್ಪಿಗೆಯನ್ನು ನೀಡುವುದರೊಂದಿಗೆ ಹಿಂದಿನ ಮೈಸೂರು ರಾಜ್ಯವು 'ಕರ್ನಾಟಕ' ಎಂಬ ಹೆಸರನ್ನು ಪಡೆಯಿತು. ಈ ಸನ್ನಿವೇಶದಲ್ಲಿ ಮೋಹನ್‌ಲಾಲ್ ಸುಖಾಡಿಯಾ ಅವರು ರಾಜ್ಯದ ರಾಜ್ಯಪಾಲರಾಗಿದ್ದರು. ಈ ಸಂದರ್ಭದಲ್ಲಿ ರಾಷ್ಟ್ರದ ಹಾಗೂ ರಾಜ್ಯದ ಧುರೀಣರಿಂದ ಶುಭ ಹಾರೈಕೆಗಳು ಕನ್ನಡಿಗರಿಗೆ ಸಲ್ಲತೊಡಗಿದವು. ೨೮.೧೦.೧೯೭೩ ರಂದು ರಾಷ್ಟ್ರದ ಪ್ರಧಾನಿ ಇಂದಿರಾಗಾಂಧಿ ಅವರು ಕನ್ನಡಿಗರನ್ನು ಉದ್ದೇಶಿಸಿ -

> ''ಕರ್ನಾಟಕ ಎಂಬ ಹೆಸರಿಗೆ ಪುರಾತನ ಇತಿಹಾಸವಿದೆ. ಈ ಹೆಸರಿನ ಹಿಂದೆ ನಮ್ಮ ಪುರಾತನ ಸಂಸ್ಕೃತಿ ಮತ್ತು ಸಂಪ್ರದಾಯವಿದೆ. ಪುರಾಣಗಳು ಮತ್ತು ವಾಸ್ತುಶಿಲ್ಪಗಳಲ್ಲಿ ಈ ಹೆಸರಿನ ಉಲ್ಲೇಖವಿದೆ. ಇದು ಅನೇಕ ಆಶೋತ್ತರಗಳನ್ನು ಪ್ರತಿಬಿಂಬಿಸುವ ಹೆಸರು. ಈ ಆಶೋತ್ತರಗಳ ಈಡೇರಿಕೆಗಾಗಿ ಕರ್ನಾಟಕದ ಜನತೆ ಸಿದ್ಧರಾಗಬೇಕು''[೧೬]

- ಎಂದು ಹಾರೈಸಿದ್ದೂ ಉಂಟು.

ರಾಷ್ಟ್ರಪತಿಗಳ ಅಂಕಿತ ದೊರೆಯುವುದರೊಂದಿಗೆ ಕನ್ನಡಿಗರು ಮುಂದೆ ಬರಲಿದ್ದ ೧೮ನೇ ರಾಜ್ಯೋತ್ಸವವನ್ನು ನಾಮಕರಣೋತ್ಸವವನ್ನಾಗಿ ಆಚರಿಸಲು ಭರದ ಸಿದ್ಧತೆಗಳನ್ನು ನಡೆಸಿದ್ದು ಗಮನಾರ್ಹ. ಸಾಂಸ್ಕೃತಿಕವಾಗಿ ಮತ್ತೆ ನಾಡನ್ನು 'ಕರ್ನಾಟಕ' ಎಂದು ಕರೆಯುವುದಕ್ಕೆ ಅಧಿಕೃತ ಕಾರ್ಯಕ್ರಮಗಳು, ಸಮಿತಿ, ಉಪಸಮಿತಿಗಳು ಅಸ್ತಿತ್ವಕ್ಕೆ ಬಂದವು. ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರು ಬೆಂಗಳೂರಿನ ಕಂಠೀರವ ಕ್ರೀಡಾಂಗಣದಲ್ಲಿ **ಕರ್ನಾಟಕ ನಾಮಕೋತ್ಸವ** ಕಾರ್ಯಕ್ರಮವನ್ನು ಉದ್ಘಾಟಿಸಿ, ಮಾತನಾಡಿದರು. ಅವರು ಈ ಚರಿತ್ರಾರ್ಹ ದಿನವನ್ನು ಕುರಿತು -

“ಇದು ಮಹಾಮಂಗಳ ದಿನ. ಬಹುದಿನಗಳ ಹಂಬಲ ತುಂಬಿ ಬಂದ ಹರ್ಷೋತ್ಸವ ಇಂದು ನಡೆಯುತ್ತಿದೆ. ‘ಕರ್ನಾಟಕ’ ಇಂದಿನಿಂದ ನಮ್ಮ ರಾಜ್ಯದ ಅಧಿಕೃತ ಹೆಸರು.

ರಾಜ್ಯಕ್ಕೆ ‘ಕರ್ನಾಟಕ’ ಎಂಬ ನಾಮಕರಣ ಕೇವಲ ಒಂದು ಆಡಳಿತ ವ್ಯವಹಾರದ ಘಟನೆಯಲ್ಲ. ಅದರ ಹಿನ್ನಲೆಯಲ್ಲಿ ಅವರ್ಣನೀಯ ಸ್ಫೂರ್ತಿ ಇದೆ. ಪರಿಣಾಮ ಇದೆ. ಅದು ನಾಡಿನ ಜನತೆಯ ಆಸೆ, ಆಕಾಂಕ್ಷೆಗಳ ಪ್ರತೀಕ; ಕನ್ನಡದ ಭಾವಬಂಧನ ಸಂಕೇತ. ನಮ್ಮ ಕರ್ನಾಟಕವನ್ನು ಆಳಿದ ಎಷ್ಟೋ ರಾಜವಂಶಗಳು, ಈ ನಾಡಿನ ಸಂಸ್ಕೃತಿ, ಸಾಹಿತ್ಯ, ಧರ್ಮ, ಕಲೆ ಎಲ್ಲವನ್ನು ಉಳಿಸಿ ಬೆಳೆಸಿದ್ದಾರೆ. ಈ ನಾಡಿಗೆ ಸುದೀರ್ಘ ರಾಜಕೀಯ, ಧಾರ್ಮಿಕ ಮತ್ತು ಸಾಮಾಜಿಕ ಪರಂಪರೆ ಇದೆ”[೧೭]

- ಎಂಬ ತಮ್ಮ ಇಂಗಿತವನ್ನು ವ್ಯಕ್ತಪಡಿಸಿದರು.

ಆದರೆ ‘ಕನ್ನಡಿಗರ ಸಾಂಸ್ಕೃತಿಕ ರಾಜಧಾನಿ’ಯಾದ ಹಂಪಿಯಲ್ಲಿ ಈ ‘ಉತ್ಸವ’ ಹಬ್ಬವಾಗಿಯೆ ಆಚರಣೆಗೊಂಡಿದ್ದು ವಿಶೇಷ. ೩೧.೧೦.೧೯೭೩ ರ ಸಂಜೆಯಿಂದಲೇ ನಾಮಕರಣ ಮಹೋತ್ಸವಕ್ಕೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ಮಧ್ಯರಾತ್ರಿಯ ವೇಳೆಗೆ ಕನ್ನಡಿಗರ ಅಧಿದೇವತೆ ಶ್ರೀ ಭುವನೇಶ್ವರಿಯ ಸನ್ನಿಧಿಯಲ್ಲಿ ಹಂಪಿಯ ವಿದ್ಯಾರಣ್ಯ ಪೀಠಾಧಿಕಾರಿ (ಶಂಕರ ಭಾರತಿ ಸ್ವಾಮಿ)ಗಳು ‘ಕರ್ನಾಟಕ ಜ್ಯೋತಿ’ಯನ್ನು ಬೆಳಗಿಸಿ, ಮಂಗಳಾರ್ಚಣೆ ಮಾಡುವುದರ ಮೂಲಕ ಸಂಭ್ರಮಿಸಿದ್ದುಂಟು. ಬಳ್ಳಾರಿಯ ಯುವಕರು-

“ನಾವು ಬಳ್ಳಾರಿ ಯುವಕರು !
ಜ್ಯೋತಿ ಒಯ್ಯ ಬಂದವರು !!
ಕರ್ನಾಟಕ ಜ್ಯೋತಿಯ ರಕ್ಷಕರು !!!”

- ಎಂಬುದಾಗಿ ಜಯಘೋಷಣೆಗಳೊಂದಿಗೆ ‘ಜ್ಯೋತಿ’ಯನ್ನು ಬಳ್ಳಾರಿ ಗಡಿಯವರೆಗೆ ಎಲ್ಲಾ ಊರುಗಳ ನಡುವೆ (ಹಾದು ಹೋಗುವಾಗ) ವಿಶೇಷ ಸ್ವಾಗತಗಳೊಂದಿಗೆ ಕೊಂಡೊಯ್ದರು. ಈ ಬಗೆಯ ಆಚರಣೆಯ ನಡುವೆ ಮುಂಜಾನೆಯ ಅನೇಕ

ಕಾರ್ಯಕ್ರಮಗಳು (೧.೧೧.೧೯೭೩) ನಾಡಿನ ಎಲ್ಲ ಕಡೆಗಳಿಂದಲೂ ಬಂದಿದ್ದ ಕನ್ನಡಿಗರನ್ನು ಹುರಿದುಂಬಿಸುತ್ತಿದ್ದವು. ಪ್ರಭಾತಫೇರಿ, ನಗರ ಸಂಕೀರ್ತನ, ಧ್ವಜವಂದನೆ, ಸಾಮೂಹಿಕ ಪ್ರತಿಜ್ಞೆ, ಮಹಾನವಮಿ ದಿಬ್ಬ ದರ್ಶನ, ಕರ್ನಾಟಕ ಸ್ತಂಭ ಭೂಮಿಪೂಜೆ, ಪಂಚವಟಿ ವೃಕ್ಷಾರೋಪಣ, ಪೂರ್ಣ ಕುಂಭಗಳ ಜಂಬೂ ಸವಾರಿ, ಸಹಭೋಜನ, ಎಲ್ಲ ಧರ್ಮಗಳ ಮಂತ್ರಪುಷ್ಪ, ನಾಡು-ನುಡಿಗಾಗಿ ಸೇವೆ ಸಲ್ಲಿಸಿದವರಿಗೆಲ್ಲ ಶ್ರದ್ಧಾಂಜಲಿ, ಕೃತಜ್ಞತೆಗಳ ಸಲ್ಲಿಕೆ ಹೀಗೆ ಹತ್ತು ಹಲವು ಕಾರ್ಯಕ್ರಮಗಳು ೧೯೫೬ ರಲ್ಲಿ ನಡೆದ 'ರಾಜ್ಯ ನಿರ್ಮಾಣ ದಿನ' (೧.೧೧.೧೯೫೬)ವನ್ನೇ ನೆನಪಿಗೆ ತರುತ್ತಿದ್ದವು.

ಹಂಪಿಯ ವಿರೂಪಾಕ್ಷ ದೇವಾಲಯದ ಸನ್ನಿಧಿ, ಬಜಾರು, ಹೇಮಕೂಟ, ಮಹಾನವಮಿ ದಿಬ್ಬ, ಕಮಲಾಪುರಗಳಲ್ಲಿ ನಡೆದ ಅನೇಕ ಕಾರ್ಯಕ್ರಮಗಳಿಗೆ ಚಾಲನೆ ನೀಡಿದವರು 'ಕರ್ನಾಟಕ ರತ್ನ ಸಿಂಹಾಸನಾಧೀಶ್ವರ'ರೆಂದೆ ಖ್ಯಾತಿ ಪಡೆದ ಮೈಸೂರಿನ ಮಹಾರಾಜರಾದ **ಜಯಚಾಮರಾಜೇಂದ್ರ ಒಡೆಯರು.** ೧.೧೧.೧೯೭೩ರ ಸಂಜೆ ಪಂಪಾಪತಿ ಹಾಗು ಭುವನೇಶ್ವರಿ ದರ್ಶನದ ಅನಂತರ ಕರ್ನಾಟಕ ರಾಜ್ಯದ ನಕಾಶೆಗೆ ಪೂಜಿಸಿ, 'ಕರ್ನಾಟಕ ಜ್ಯೋತಿ'ಯನ್ನು ಬೆಳಗಿಸಿದರು. ಈ ಜ್ಯೋತಿ ಬೆಳಗುವುದರೊಂದಿಗೆ ನಾಡಿಗೆ **ಕರ್ನಾಟಕ** ಎಂಬ ಅಧಿಕೃತ ನಾಮಕರಣವನ್ನು ಸಾಂಕೇತಿಕವಾಗಿ ಮಾಡಲಾಯಿತು. ಕನ್ನಡಿಗರು ಈ ಚಾರಿತ್ರಿಕ ಸನ್ನಿವೇಶದಲ್ಲಿ ಉತ್ಸಾಹದಿಂದ ಜನ -

> "ಕರ್ನಾಟಕ ಸಿಂಹಾಸನಾಧೀಶ್ವರರಿಗೆ ಜಯವಾಗಲಿ !
> ಕರ್ನಾಟಕಕ್ಕೆ ಜಯವಾಗಲಿ !!
> ಕರ್ನಾಟಕ ಜ್ಯೋತಿ ನಂದಾದೀಪವಾಗಲಿ !!!"

- ಎಂಬ ಘೋಷಣೆಗಳನ್ನು ಕೂಗುವುದರ ಮುಖೇನ ಸಂತಸ ವ್ಯಕ್ತಪಡಿಸಿದರು. ಇದೇ ಸಂದರ್ಭದಲ್ಲಿ 'ಸಾವಿರ ಹಾಡಿನ ಸರದಾರ'ರೆಂದೆ ಖ್ಯಾತಿ ಪಡೆದ **ಬಾಳಪ್ಪ ಹುಕ್ಕೇರಿ** ಅವರ 'ಜ್ಯೋತಿ ಬೆಳಗುತಿದೆ; ಕರ್ನಾಟಕ ಜ್ಯೋತಿ ಬೆಳಗುತಿದೆ' ಎಂಬ ಹಾಡು ಅಚ್ಚಳಿಯದೆ ಉಳಿಯಿತು. ಅಂತೆಯೇ **ಬಿ.ಎಸ್. ರಾಮಾಚಾರ್** ಅವರ 'ಜಯ ಕರ್ನಾಟಕ ಗೀತೆ'ಯು ಸಹ. **ಕೃಷ್ಣಕುಮಾರ ಕಲ್ಲೂರ**ರ 'ಜಯಕರ್ನಾಟಕ ಸಮರ್ಪಣ ಗೀತೆಗಳು' ಹಾಗು **ಸೂರ್ಯನಾಥ ಕಾಮತ್** ಅವರ 'ವಿಜಯನಗರ ಸಾಮ್ರಾಜ್ಯ' ಎಂಬ ಕೃತಿಗಳು ಮಹಾರಾಜರಿಂದಲೇ ಬಿಡುಗಡೆಗೊಂಡವು. ಬಹುಶಃ ಈ ಬಗೆಯ ನಾಡು-ನುಡಿ-

ಸಂಸ್ಕೃತಿಗಳ ಪ್ರತೀಕವಾಗಿ ನಾಮಕರಣೋತ್ಸವ ನಡೆದು ಮೈಸೂರು ರಾಜ್ಯವು ಕರ್ನಾಟಕ ರಾಜ್ಯವಾದದ್ದು ಕನ್ನಡಿಗರಿಗೆ ಮರೆಯಲಾರದ ಚಾರಿತ್ರಿಕ ಘಟನೆ.

ತಾರತಮ್ಯದ ನೋಟಗಳಿಗೆ ಕಾರಣವಾಗಿದ್ದ ಅಂದಿನ ಸಂದರ್ಭದಲ್ಲಿ, 'ಮೈಸೂರು ವ್ಯಾಮೋಹಿ' ತನದ ಧೋರಣೆಗಳಿಗೆ ಕೊನೆ ಹಾಡಿದವರು ಮೈಸೂರಿನ ಮಹಾರಾಜರೆ. ಅವರು ನಾಡಿನ ಎಲ್ಲ ಭಾಗಗಳ ಕನ್ನಡಿಗರ ಪ್ರತಿನಿಧಿಸುವ 'ನಾಮಕರಣೋತ್ಸವ'ದಲ್ಲಿ ಭಾಗಿ ಆಗಿದ್ದುದು ಹಾಗು ಅದಕ್ಕಾಗಿ ಹಂಪಿಯಲ್ಲಿಯೆ ತಂಗಿದ್ದುದು ಹೆಮ್ಮೆಯ ಸಂಗತಿಗಳು. ಕರ್ನಾಟಕ ಜ್ಯೋತಿಯ ಮೂರನೆಯ ದಿನ, ಅಂದರೆ ೩.೧೧.೧೯೭೩ ರಂದು ಗದಗನ್ನು ಮುಟ್ಟಬೇಕಿತ್ತು. ಅಲ್ಲಿ ಅಂದರೆ ವೀರನಾರಾಯಣನ ಸನ್ನಿಧಿಯಲ್ಲಿ ಈ ಕರ್ನಾಟಕ ಜ್ಯೋತಿಯನ್ನು ಮಹಾರಾಜರೇ ನಂದಾದೀಪವಾಗಿಸುವ ಕಾರ್ಯಕ್ರಮ ಯೋಜಿತವಾಗಿತ್ತು. ಮಹಾರಾಜರೊಂದಿಗೆ ನಾಡಿನ 'ಅಧಿಕೃತ ನಾಮಕರಣ'ಕ್ಕೆ ಕಾರಣೀಭೂತರೆನ್ನಿಸಿಕೊಂಡ ಮುಖ್ಯಮಂತ್ರಿ ದೇವರಾಜ ಅರಸರನ್ನು ಸಹ ಸನ್ಮಾನಿಸುವ ಉತ್ಸಾಹ ಈ ಭಾಗದವರದು. ಇಬ್ಬರಿಗೂ 'ಕರ್ನಾಟಕದ ನಕ್ಷೆ' ಹಾಗು ಅವರ ಭಾವಚಿತ್ರವಿರುವ ನೆನಪಿನ ಕಾಣಿಕೆಗಳನ್ನು ನೀಡಿ ಸನ್ಮಾನಿಸಲಾಯಿತು. ಭೌತಿಕ ಸಿಂಹಾಸನವನ್ನು ತೊರೆದು ಸದಾ ಕನ್ನಡಿಗರ ಹೃದಯದಲ್ಲಿ, ನೆನಪಿನಲ್ಲಿ ಉಳಿಯುವಂತೆ ಆದ ಮೈಸೂರಿನ ಒಡೆಯರು ಹಾಗು 'ತಾನು ಕಾರಣೀಭೂತನಲ್ಲ'ವೆಂದೇ ಹೇಳುತ್ತಿದ್ದ ದೇವರಾಜ ಅರಸು ಅವರು 'ಕರ್ನಾಟಕ' ನಾಮಕರಣದ ಚರಿತ್ರೆಯಲ್ಲಿ ಉಳಿಯುವಂತೆ ಆಯಿತು. ಸನ್ಮಾನಿಸಿದ್ದಕ್ಕಾಗಿ ಈರ್ವರು ಕನ್ನಡಿಗರಿಗೆ ಧನ್ಯವಾದಗಳನ್ನು ಅರ್ಪಿಸಿದರು. ಈ ಎಲ್ಲ ಬಗೆಯ ಕಾರ್ಯಕ್ರಮಗಳಿಗೆ ಪ್ರಧಾನ ರೂವಾರಿ ಆಗಿದ್ದವರು ಕೆ.ಎಚ್. ಪಾಟೀಲರು. ನಾಮಕರಣೋತ್ಸವ ಸಮಿತಿಯ ಅಧ್ಯಕ್ಷರೂ ಆಗಿದ್ದ ಇವರು ಈ ಉತ್ಸವವನ್ನು ಕರ್ನಾಟಕದ ಚರಿತ್ರೆಯಲ್ಲಿ ದಾಖಲಾಗುವಂತೆ ಯೋಜಿಸಿದ್ದುದು ವಿಶೇಷವಾಗಿತ್ತು.[೧೮]

ಶತಶತಮಾನಗಳ ಹಿಂದಿನಿಂದಲೂ ನಾಡಿಗೆ ಸಾಂಸ್ಕೃತಿಕವಾಗಿ ದತ್ತವಾಗಿದ್ದ ಹೆಸರು 'ಕರ್ನಾಟಕ'. ಆದರೆ ವಸಾಹತುಶಾಹಿ ಆಳ್ವಿಕೆಯ ಕಾಲಘಟ್ಟದಲ್ಲಿ ನಾಡು ಛಿದ್ರಗೊಂಡು ವಿಭಿನ್ನ ಆಡಳಿತ ಘಟನೆಗಳಲ್ಲಿ ಹರಿದು ಹಂಚಿ ಹೋಗಿತ್ತು. ಹರಿದು ಹಂಚಿ ಹೋಗಿದ್ದ ಕನ್ನಡಿಗರು ಒಂದುಗೂಡಲು ಮತ್ತೆ ಪ್ರಯತ್ನಿಸಿ ಏಕೀಕರಣದ ಚಳವಳಿಯನ್ನೇ ಹೂಡಬೇಕಾಯಿತು. ಅದರ ಸಾಕಾರವೆ ೧೯೫೬ ರ ನವೆಂಬರ್ ೧ ರಂದು ಅಸ್ತಿತ್ವಕ್ಕೆ ಬಂದ 'ವಿಶಾಲ ಮೈಸೂರು ರಾಜ್ಯ'. ಬಹುಶಃ ೧೯೫೬ ರಲ್ಲಿ ಈ ಹೆಸರಿನಿಂದ ಗುರುತಿಸಿಕೊಳ್ಳಲು ನಾವು 'ಮೈಸೂರು ಜವಾಬ್ದಾರಿ ಸರ್ಕಾರ'ಕ್ಕೆ ನಡೆಸಿದ ಪ್ರಯತ್ನಗಳೇ (೧೯೪೭ ರಿಂದಲೂ)

ಕಾರಣ ಆಗಿರಬಹುದು. ಜವಾಬ್ದಾರಿ ಸರ್ಕಾರವನ್ನು ಹೊಂದುವ ಭರಾಟೆಯಲ್ಲಿ ನಾಡಿಗೆ 'ಮೈಸೂರು ರಾಜ್ಯ'ವೆಂಬ ಹೆಸರೇ ಅಧಿಕೃತವಾಗಿ ಬಿಟ್ಟಿತ್ತು. ಹೀಗಾಗಿ ಒಂದುಗೂಡಿದ ಕರ್ನಾಟಕದ ಪರಿಸರದವರು ತಮ್ಮನ್ನು ತಾವು ಕರೆಸಿಕೊಂಡದ್ದು ಮಾತ್ರ 'ಮೈಸೂರು ರಾಜ್ಯ'ದವರೆಂದೆ. ಇದು ಕನ್ನಡಿಗರ ಅಂತರಾಳದ ಅಸಮಾಧಾನವಾಗಿ ಮತ್ತೊಮ್ಮೆ ನಾಡಿಗೆ ಹೆಸರನ್ನು 'ಕರ್ನಾಟಕ'ವನ್ನಾಗಿಸಲು ಹೆಣಗಬೇಕಾಯಿತು. ಈ ಹೆಣಗಾಟಕ್ಕೆ ನಮ್ಮವರೆ ಅಸಮಾಧಾನದ ಧೋರಣೆಗಳನ್ನು ವ್ಯಕ್ತಪಡಿಸಿದ್ದೂ ಅಲ್ಲದೆ, ವಿಳಂಬಕ್ಕೂ ಕಾರಣಕರ್ತರಾದುದು ವಿರೋಧಾಭಾಸವೇ ಸರಿ. ಆದರೆ ನಾಡಿನ **ಏಕೀಕರಣದ ಚರಿತ್ರೆ**ಯ ರೀತಿಯಲ್ಲಿಯೆ **ನಾಮಕರಣದ ಚರಿತ್ರೆ**ಗೂ ಹಲವು ಬಗೆಯ ಸಂಗತಿಗಳು, ಘಟನೆಗಳು ಸಾಕ್ಷಿಯಾದವು. ಅನೇಕ ವ್ಯಕ್ತಿಗಳು ತಮ್ಮನ್ನು ತಾವು ತೊಡಗಿಸಿಕೊಂಡದ್ದೂ ಉಂಟು. ಅವರೆಲ್ಲರನ್ನೂ ಇಲ್ಲಿ ದಾಖಲಿಸಲು ಸಾಧ್ಯವಾಗಲಿಲ್ಲ. ಈ ಬಗೆಗೆ ವಿಸ್ತ್ರತ ರೂಪದಲ್ಲಿಯೆ ದಾಖಲಿಸಬೇಕಾದ ಜರೂರು ಇದೆ. ಈ ಮಿತಿಯ ಅರಿವಿನೊಂದಿಗೆ ಪ್ರಸ್ತುತ ಅಧ್ಯಯನದಲ್ಲಿ ಘಟನೆಗಳಿಗೆ ಮಾತ್ರ ಪ್ರಾಶಸ್ತ್ಯ ನೀಡಲಾಗಿದೆ. ಇದಕ್ಕೆ ಇನ್ನಾವ ಪೂರ್ವಾಗ್ರಹಗಳೂ ಇಲ್ಲ.

**ಆಕರ - ಟಿಪ್ಪಣಿಗಳು**

೦೧. ಆಲೂರ ವೆಂಕಟರಾಯ., **ಕರ್ನಾಟಕತ್ವದ ವಿಕಾಸ**, (ಧಾರವಾಡ; ೧೯೫೭), ಪುಟ-೩೭-೪೪. (೫ ನೆಯ ಅನುಬಂಧ), ಧಾರವಾಡದ ನಾರಾಯಣ ಸಂಗಮರು 'ಶ್ರೀ ಪಂಪಾಕ್ಷೇತ್ರದಲ್ಲಿ ನವರಾಜ್ಯೋದಯದ ಉತ್ಸವ' ಎಂಬ ಲೇಖನವನ್ನು ಬರೆದು ಪತ್ರಿಕೆಗಳಿಗೆ ಕಳುಹಿಸಿಕೊಟ್ಟಿದ್ದರು. 'ಪ್ರದೀಪ' ಮಾಸಪತ್ರಿಕೆ (೧೯೫೭ರ ನವೆಂಬರ್) ಯಲ್ಲಿ ಈ ಲೇಖನ ಪ್ರಕಟ ಆಗಿದೆ.

೦೨. ೧೯೫೬ ರ ಅಕ್ಟೋಬರ್ ೨೧ ರಂದು ಆಯ್ಕೆ ಆದ ನಿಜಲಿಂಗಪ್ಪನವರ ಹೆಸರನ್ನು ಸೂಚಿಸಿದವರು ಅಂದಿನ ಮುಖ್ಯಮಂತ್ರಿ ಆಗಿದ್ದ ಕಡಿದಾಳ್ ಮಂಜಪ್ಪನವರು. ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಎಸ್. ಚೆನ್ನಯ್ಯನವರು ಸಹ ನಿಜಲಿಂಗಪ್ಪನವರ ಏಕೀಕರಣವನ್ನು ಕುರಿತ ಅವರ ಕಾಳಜಿ, ಸೇವೆಗಳಿಗೆ ತಕ್ಕ ಮನ್ನಣೆ ಎಂದು ಹೊಗಳಿದ್ದೂ ಉಂಟು. (ಡೆಕ್ಕನ್ ಹೆರಾಲ್ಡ್ ದಿನಪತ್ರಿಕೆ; ೨೨.೧೦.೧೯೫೬)

೦೩. **ಮೈಸೂರು ವಿಧಾನಸಭೆ ಚರ್ಚೆಗಳು**, ೨೪ ಡಿಸೆಂಬರ್ ೧೯೫೬, ಪು-೨೨೩.

೦೪. ನಾಡು 'ಕರ್ನಾಟಕ' ಎಂದು ಕರೆಸಿಕೊಳ್ಳುವುದರ ಬಗೆಗೆ ದೊಡ್ಡಮೇಟಿ ಅವರು ತಮ್ಮ ಹೆಸರಿನಲ್ಲಿ ಹಾಗು ಬೇರೆಯವರ ಹೆಸರಿನಲ್ಲಿ ಲೇಖನ, ಕೃತಿಗಳನ್ನು ಪ್ರಕಟಿಸಿದ್ದು ಉಂಟು. ಅಂಥದ್ದುರಲ್ಲಿ **ರಾಜ್ಯದ ಹೆಸರು 'ಕರ್ನಾಟಕ'ವೆಂದೇ ಆಗಬೇಕು** ಎಂಬ ಕೃತಿಯೂ ಮಾಹಿತಿ

ಪ್ರಧಾನವಾದುದು. (ಈ ಕೃತಿಯನ್ನು ಪೂಜಾರ ನೀಲಗಂಗಯ್ಯ ಮತ್ತು ದೊಡ್ಡಮೇಟಿ ಜ್ಞಾನದೇವ ಅವರ ಸಂಪಾದನೆಯಲ್ಲಿ ಪ್ರಕಟಿಸಿದ್ದರು.)

೦೫. ಕೆ.ವಿ. ಪುಟ್ಟಪ್ಪ ಅವರು ೨೭.೧.೧೯೬೫ ರಂದು 'ರಾಷ್ಟ್ರಕವಿ' ಪ್ರಶಸ್ತಿಯನ್ನು ಪಡೆಯುವಾಗ ಹೇಳಿದ ಮಾತುಗಳು.

೦೬. ಸತ್ಯದೇವ, 'ರಾಜಕೀಯ ಕುತಂತ್ರದಿಂದ ರಾಜ್ಯದ ಹೆಸರಿನ ಚರ್ಚೆ ಮುಂದುವರೆಯಿತು', **ಪ್ರಪಂಚ** (೭.೧೦.೬೨), (ಡಾ.ಅಶೋಕ ದೊಡ್ಡಮೇಟಿ ಸಂಪಾದಿತ ಕೃತಿ 'ಕ್ರಾಂತಿ ಕರ್ನಾಟಕ'ದ ಉಲ್ಲೇಖಗಳಿಂದ)

೦೭. ಆಲೂರ ವೆಂಕಟರಾಯ, **ಕನಾಟಕತ್ವದ ವಿಕಾಸ**, ಪು-೨೩-೨೪

೦೮. ಸತ್ಯನಾರಾಯಣ, ನಮ್ಮ 'ಕನಸಿನ ಕರ್ನಾಟಕ'ವೆಂದು?, **ಪ್ರಪಂಚ** (೨೮.೧.೬೨) ಹುಬ್ಬಳ್ಳಿ (ನಿಯತಕಾಲಿಕದಲ್ಲಿ ಪ್ರಕಟವಾದ ಲೇಖನ)

೦೯. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರು ಪ್ರಕಟಿಸಿರುವ ಅಧ್ಯಕ್ಷೀಯ ಭಾಷಣಗಳು ಹಾಗು ವಾರ್ಷಿಕ ಅಧಿವೇಶನಗಳಲ್ಲಿನ ನಿರ್ಣಯಗಳನ್ನು ಆಧಾರವನ್ನಾಗಿಸಿ ಕೊಳ್ಳಲಾಗಿದೆ.

೧೦. ನಾಯಕ ಹಾ.ಮಾ., (ಸಂ.), **ಕರ್ನಾಟಕಕ್ಕೆ ಶುಭವಾಗಲಿ**, (ಮೈಸೂರು; ೧೯೭೭), ಪುಟ-೯

೧೧. ವೆಂಕಟೇಶ್ ಹೆಚ್.ಎ., (ಪ್ರ.ಸಂ.) **ಕರ್ನಾಟಕದ ಅರಸು**, (ಮಂಡ್ಯ; ೨೦೦೦), ಪುಟ-೧೨೭-೮, (ಲೇಖಕರೇ ಚದುರಂಗರನ್ನು ಸಂದರ್ಶನ ಮಾಡುತ್ತಿದ್ದಾಗ ಧ್ವನಿ ಸುರುಳಿಯಲ್ಲಿ ದಾಖಲಿಸಿಕೊಂಡಿರುವ ಸಂಗತಿ).

೧೨. ಇದೇ ಬಗೆಯ ಸಂಘರ್ಷ ಕನ್ನಡ ಸಾಹಿತ್ಯ ಪರಿಷತ್ತಿನ ಹೆಸರಿನ ವಿಚಾರದಲ್ಲೂ ನಡೆದಿತ್ತು. 'ಕರ್ನಾಟಕ ಸಾಹಿತ್ಯ ಪರಿಷತ್ತು' ಎಂದು ಅಂತಿಮವಾಗಿ ತೀರ್ಮಾನ ಆಗಿತ್ತು. ಈ ಗಲಾಟೆ 'ನೋಣ' ಗಲಾಟೆ ಎಂದೆ ಪ್ರಸಿದ್ಧಿ ಪಡೆದಿತ್ತು. ಅಂದರೆ 'ಕರ್ನಾಟಕ' ಶಬ್ದದಲ್ಲಿ 'ಣ' ಅಥವಾ 'ನ' ಇರಬೇಕೆ ಎಂಬ ಹಿನ್ನಲೆಯಲ್ಲಿ.

೧೩. ನಾಯಕ ಹಾ.ಮಾ., (ಸಂ.), ಮೇಲಿನದೆ, (ಮೈಸೂರು ವಿಧಾನಸಭೆಯಲ್ಲಿ ರಾಜ್ಯದ ಹೆಸರನ್ನು 'ಕರ್ನಾಟಕ' ಎಂದು ಬದಲಾಯಿಸಲು ನಿರ್ಣಯ ಮಂಡಿಸಿ ಮಾಡಿದ ಭಾಷಣ) ಪುಟ-೧೦-೧೧

೧೪. ಪಾಟೀಲ ಕೆ.ಎಫ್ ಮತ್ತು ಇತರರು, (ಸಂ.), **ಕರ್ನಾಟಕ** (ಬೆಂಗಳೂರು; ೧೯೭೩), (ನಾಮಕರಣೋತ್ಸವ ಸಂಪುಟಕ್ಕಾಗಿ ಕಳುಹಿಸಿಕೊಟ್ಟ ಶುಭ ಹಾರೈಕೆಗಳು) ಪುಟ-೨೪-೨೫

೧೫. ನಾಯಕ ಹಾ.ಮಾ., (ಸಂ.), ಮೇಲಿನದೆ ಪುಟ-೧೫

೧೬. ಪಾಟೀಲ ಕೆ.ಎಫ್. ಮತ್ತು ಇತರರು (ಸಂ.), ಮೇಲಿನದೆ

೧೭. ನಾಯಕ ಹಾ.ಮಾ., (ಸಂ.), ಮೇಲಿನದೆ, ಪು-೧೮

೧೮. ಹಂಪಿ, ಗದಗಿನಲ್ಲಾದ ನಾಮಕರಣೋತ್ಸವದ ಎಲ್ಲ ವ್ಯಕ್ತಿ, ಸಂಸ್ಥೆ, ಕಾರ್ಯಕ್ರಮದ ವಿವರಗಳನ್ನು ಕೆ.ಎಫ್. ಪಾಟೀಲ ಅವರ **ಕರ್ನಾಟಕ-ನಾಮಕರಣ ಮಹೋತ್ಸವದ ಸಂಚಿಕೆಯಲ್ಲಿ** ದಾಖಲಾಗಿವೆ.

# ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20.00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15.00 |
| 3. | ಶಾಂತವೇರಿ ಗೋಪಾಲ ಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15.00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20.00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20.00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15.00 |
| 7. | ಜಿ.ವಿ. ಹಳ್ಳಿಕೇರಿ | ಡಾ॥ ಆರ್.ಎಂ.ಎಲ್. ಪಾಟೀಲ್ | 15.00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15.00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15.00 |
| 10. | ಕೆ.ಟಿ. ಭಾಷ್ಯಂ | ಡಾ॥ ವಿಘ್ನೇಶ್ ಎನ್. ಭಟ್ | 15.00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15.00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20.00 |
| 13. | ಜಗಳೂರು ಇಮಾಂ | ಜಿ.ಎಸ್. ಸದಾನಂದ | 15.00 |
| 14. | ಕೆ.ಸಿ. ರೆಡ್ಡಿ | ಸಂಧ್ಯಾರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20.00 |